# ದೇವರ ಜ್ಞಾನ

# ಕಬ್ಜಾ ಆಗಿದೆ










ದೇವರ ಜ್ಞಾನ













ಕಬ್ಜಾ ಜ್ಞಾನ

ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

www.thraithashakam.org





# ದೇವರ ಜ್ಞಾನ ಕಬ್ಜಾ ಆಗಿದೆ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 60/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ-ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

## ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ -
ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ-
ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ-ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ - ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು-
ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು-
ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು-ಆನಂದಮು.
81. ದಶ-ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು-
ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
ಮಹೇಂದ್ರಜಾಲ,
ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
(ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು-
ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು-
ಆರು-ತೊಮ್ಮಿದಿ
89. 6-3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ-ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು-ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ-ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು - ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು-ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು-ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮೀನಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

**(ಇಂದೂ ಜ್ಞಾನ ವೇದಿಕೆ ಸದಸ್ಯರು)**

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನಂ.–38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದೇವರ ಜ್ಞಾನ ಕಬ್ಜಾ ಆಗಿದೆ



ಜ್ಞಾನ ಎರಡು ವಿಧಗಳಲ್ಲಿದೆ. ಒಂದು ಪ್ರಪಂಚ ಜ್ಞಾನ, ಎರಡು ಪರಮಾತ್ಮನ ಜ್ಞಾನ ಎಂದು ಎನ್ನುತ್ತೇವೆ. ಪ್ರಪಂಚ ಜ್ಞಾನವು ನಾಲ್ಕು ಶಾಸ್ತ್ರಗಳ ಮೇಲೆ ಆಧಾರಪಟ್ಟಿದೆ. ಪರಮಾತ್ಮ ಜ್ಞಾನವು ಒಂದೇ ಒಂದು ಶಾಸ್ತ್ರದ ಮೇಲೆ ಆಧಾರಪಟ್ಟಿದೆ. ಪ್ರಪಂಚ ಜ್ಞಾನವು ಗಣಿತ, ಖಗೋಳ, ರಸಾಯನ, ಭೌತಿಕ ಎಂಬ ನಾಲ್ಕು ಶಾಸ್ತ್ರಗಳ ಮೇಲೆ ಆಧಾರಪಟ್ಟಿರುವಾಗ, ದೈವಜ್ಞಾನವು ಬ್ರಹ್ಮವಿದ್ಯಾಶಾಸ್ತ್ರದ ಮೇಲೆ ಆಧಾರಪಟ್ಟಿದೆ. ಜ್ಞಾನ ಎಂದರೆ ತಿಳಿಸುವುದೆಂದು ಹೇಳಬಹುದು. ಪ್ರಪಂಚಜ್ಞಾನವು ಪ್ರಪಂಚವನ್ನು ಕುರಿತು ತಿಳಿಸುವುದು. ಪರಮಾತ್ಮನ ಜ್ಞಾನವು ದೇವರನ್ನು ಕುರಿತು ತಿಳಿಸುವುದು. ಪರಮಾತ್ಮನೆಂದರೂ, ದೇವರೆಂದರೂ ಒಂದೇ ಎಂದು ತಿಳಿಯುವುದೇ ಜ್ಞಾನವಾಗುತ್ತದೆ. ಹಾಗೆಯೇ ಪ್ರಕೃತಿಯೆಂದರೂ, ಪ್ರಪಂಚವೆಂದರೂ ಒಂದೇ ಎಂದು ತಿಳಿಯುವುದು ಕೂಡ ಜ್ಞಾನವೇ ಆಗುತ್ತದೆ. ದೇವರ ವಿಧಾನವನ್ನು ಕುರಿತು ತಿಳಿಸುವುದು ಕೂಡ ದೇವರ ಜ್ಞಾನವಾಗುತ್ತದೆ. ಪ್ರಪಂಚ ವಿಧಾನವನ್ನು ಕುರಿತು ತಿಳಿಸುವುದು ಪ್ರಪಂಚ ಜ್ಞಾನವಾಗುತ್ತದೆ. ಪ್ರತಿ ಮನುಷ್ಯ ಅಲ್ಪ ಸ್ವಲ್ಪ ಎರಡು ಜ್ಞಾನಗಳೊಂದಿಗೆ ಸಂಬಂಧಪಟ್ಟಿರುವನು. ಬಹುಶಃ ಬಹಳ ಜನರು ಪ್ರಪಂಚ ಜ್ಞಾನದೊಂದಿಗೆ ಸಂಬಂಧಪಟ್ಟಿರುವರು. ಅಂಥವರು ಪರಮಾತ್ಮನ ಜ್ಞಾನದೊಂದಿಗೆ ಸಹ ಸ್ವಲ್ಪ ಸಂಬಂಧಪಟ್ಟಿರುವರು. ದೇವರ ಜ್ಞಾನದೊಂದಿಗೆ ಹೆಚ್ಚು ಸಂಬಂಧಪಟ್ಟಿರುವರು ಪ್ರಪಂಚ ಜ್ಞಾನದೊಂದಿಗೆ ಕಡಿಮೆ ಸಂಬಂಧ ಹೊಂದಿರುತ್ತಾರೆ. ದೇವರ ಜ್ಞಾನದೊಂದಿಗೆ ಸಂಬಂಧವಿರುವವರು ಭೂಮಿಮೇಲೆ ಕಡಿಮೆ ಸಂಖ್ಯೆಯಲ್ಲಿದ್ದಾರೆ. ಒಟ್ಟಾರೆ ಪ್ರತಿ ಮನುಷ್ಯ ಎರಡು ಜ್ಞಾನಗಳ ಮೇಲೆ ಸಂಬಂಧಪಟ್ಟಿದ್ದಾನೆ.

ಒಂದೇ ಜ್ಞಾನದೊಂದಿಗೆ ಸಂಬಂಧಪಟ್ಟಿರುವವರು ಯಾರೂ ಇಲ್ಲ. ಶೇಕಡ 99.5 ಜನರು ಪ್ರಪಂಚ ಜ್ಞಾನದೊಂದಿಗೆ ತುಂಬಿರುವವರಾದರೂ ಕನಿಷ್ಟ ಅರ್ಧ(1/2) ಭಾಗವಾದರೂ ದೇವರ ಧ್ಯಾಸ ಹೊಂದಿರುವರು. ಪೂರ್ತಿ ನಾಸ್ತಿಕನಾದರೂ ದೇವರು ಇಲ್ಲವೆನ್ನುತ್ತಾ ದೇವರನ್ನು ಜ್ಞಾಪಕ ಮಾಡಿ ಕೊಳ್ಳುತ್ತಿದ್ದಾನೆ. ಈ ವಿಧವಾಗಿ ಒಂದೇ ಜ್ಞಾನ ಆಸಕ್ತಿ ಇರುವವರು ಯಾರೂ

ಇಲ್ಲದೆ ಅಲ್ಪ ಸ್ವಲ್ಪ ಜನರು ಎರಡರ ಬಗ್ಗೆ ಆಸಕ್ತಿ ಇರುವವರೇ ಇದ್ದಾರೆ. ಪ್ರತಿ ಮನುಷ್ಯನ ಜೀವನದಲ್ಲಿ ಹುಟ್ಟಿದಾಗಿನಿಂದ ಸಾಯುವವರೆಗು ಪ್ರಪಂಚ ವಿಷಯದಲ್ಲಾಗಲಿ, ಪರಮಾತ್ಮನ ವಿಷಯದಲ್ಲಾಗಲಿ ಸಮಸ್ಯೆಗಳು ಎದುರಾಗುತ್ತಲೇ ಇರುತ್ತವೆ. ಆದರೇ ಪ್ರಪಂಚದ ವಿಷಯದಲ್ಲಿ ಎಲ್ಲರೂ ಸರಿಯಾದ ನಿರ್ಣಯ ತೆಗೆದುಕೊಳ್ಳುವರೆಂದು ನಂಬಿಕೆಯಿಲ್ಲ. ಪ್ರಪಂಚ ವಿಷಯದಲ್ಲಿ ತಪ್ಪು ನಿರ್ಣಯಗಳು ತೆಗೆದುಕೊಂಡು ಆ ನಿರ್ಣಯಗಳಿಂದ ದುಃಖಪಡುವವರಿದ್ದಾರೆ. ಹಾಗೆಯೇ ಒಳ್ಳೆಯ ನಿರ್ಣಯಗಳು ತೆಗೆದುಕೊಂಡು ಸುಖಪಡುವವರೂ ಇದ್ದಾರೆ. ದೇವರ ವಿಷಯದಲ್ಲೂ ಸಹ ತಪ್ಪು ನಿರ್ಣಯ ತೆಗೆದುಕೊಂಡು ದೇವರಿಗೆ ದೂರವಾಗುವವರೂ ಇದ್ದಾರೆ. ಒಳ್ಳೆಯ ನಿರ್ಣಯ ತೆಗೆದುಕೊಂಡು ದೇವರಿಗೆ ಹತ್ತಿರವಾಗುವವರೂ ಇದ್ದಾರೆ. ಆದರೆ ಪಕ್ಕದಲ್ಲಿ ನೋಡುವವರಿಗೆ ಇತರ ಮನುಷ್ಯರಲ್ಲಿನ ನಿರ್ಣಯಗಳು ಒಳ್ಳೆಯದು ಹಾಗೂ ಕೆಟ್ಟದ್ದು ಎರಡು ವಿಧಗಳಂತೆ ಕಾಣಿಸುತ್ತಿದ್ದರೂ, ನಿರ್ಣಯ ತೆಗೆದುಕೊಳ್ಳುವವರಿಗೆ ಅವರ ನಿರ್ಣಯಗಳೆಲ್ಲ ಒಳ್ಳೆಯದಾಗಿಯೇ ಕಾಣಿಸುತ್ತಿರುತ್ತವೆ. ಆದ್ದರಿಂದ ಎಲ್ಲರೂ ತಮ್ಮ ನಿರ್ಣಯವು ಒಳ್ಳೆಯದೇಯೆಂದು ವಾದಿಸುತ್ತಿರುತ್ತಾರೆ.

ಒಬ್ಬ ವ್ಯಕ್ತಿ ಕೆಟ್ಟ ಕಾರ್ಯವಾದಂತ ಕಳ್ಳತನವನ್ನು ಮಾಡಿ ತನ್ನ ನಿರ್ಣಯ ಒಳ್ಳೆಯದೇಯೆಂದು, ತನ್ನ ಕೆಲಸವನ್ನು ದೇವರು ಮೆಚ್ಚಿಕೊಳ್ಳುವನೆಂದು, ತಾನು ಮಾಡಿದ ಕೆಲಸವನ್ನು ದೇವರು ನೋಡಿ ಒಪ್ಪಿಕೊಳ್ಳುವನೆಂದು ಹೇಳುವನು. ಹಾಗಿರುವಾಗ ಅವನನ್ನು "ಕಳ್ಳತನ ಕೆಟ್ಟಕೆಲಸ ಅಲ್ಲವೇ! ನೀನು ಮಾಡಿದ್ದನ್ನು ದೇವರು ಹೇಗೆ ಒಪ್ಪಿಕೊಳ್ಳುವನು?" ಎಂದು ಕೇಳಿದರೆ ಅವನು ತನ್ನ ಕೆಲಸವನ್ನು ಸಮರ್ಥಿಸಿಕೊಳ್ಳುವುದಕ್ಕೆ ತಕ್ಕಹಾಗೆ ಆಧಾರಗಳೆಲ್ಲವು ಹೇಳಿ, ಇದನ್ನನುಸರಿಸಿ ದೇವರು ನನ್ನ ಕೆಲಸವನ್ನು ಒಪ್ಪಿಕೊಂಡಹಾಗಲ್ಲವೇ! ಎಂದು ಹೇಳುತ್ತಿದ್ದಾನೆ. ಇಲ್ಲಿಗೆ ಸುಮಾರು 38 ವರ್ಷಗಳ ಹಿಂದೆ 1977ನೇ ವರ್ಷದಲ್ಲಿ ಒಬ್ಬ ಕಳ್ಳನೊಂದಿಗೆ ನಾನು ಮಾತನಾಡುವುದು ನಡೆದಿದೆ. ಒಂದು ಗುಡಿಯಲ್ಲಿ ಭಜನೆ ಮಾಡುವುದಕ್ಕೆ ಬಂದ ಒಬ್ಬ ವ್ಯಕ್ತಿಯೊಂದಿಗೆ ಆತನ ವೃತ್ತಿ ಕಳ್ಳತನವೆಂದು ತಿಳಿದು

ಮಾತನಾಡುವುದು ನಡೆದಿದೆ. ಆಗ ಆತನು ತನ್ನ ಕೆಲಸವನ್ನು ಸಮರ್ಥಿಸಿಕೊಳ್ಳುತ್ತಾ ಹೀಗೆಂದನು. "ನಾನು ಕಳ್ಳತನಕ್ಕೆ ಹೋಗುವ ಮೊದಲು ಗುಡಿಗೆ ಹೋಗಿ, ದೇವರಿಗೆ ನಮಸ್ಕಾರ ಮಾಡಿ, ನಾನು ಎಲ್ಲಿಗೆ ಕಳ್ಳತನಕ್ಕೆ ಹೋಗುವುದು ಹೇಳಿ, ಕಳ್ಳತನಕ್ಕೆ ಯಾವ ಆತಂಕವಿಲ್ಲದೇ ನಡೆಯುವಂತೆ ನೋಡೆಂದು ಮುಗಿದು ಹೋಗುತ್ತಿದ್ದೇನೆ. ನಾನು ಮಾಡುತ್ತಿರುವ ಕೆಲಸ ಕೆಟ್ಟದಾದರೆ ದೇವರು ನನ್ನ ಕೆಲಸವನ್ನು ಮಾಡಬೇಡವೆಂದು ಬುದ್ಧಿ ಹುಟ್ಟಿಸಬಹುದು ಅಲ್ಲವೇ! ಇಲ್ಲಿಯವರೆಗು ನಾನು ಮಾಡಿದ ಕಳ್ಳತನಗಳೆಲ್ಲವೂ ದೇವರ ದಯೆಯಿಂದ ಸುಲಭವಾಗಿ ನಡೆದುಹೋಗಿವೆ. ಒಂದು ದಿನ ರಾತ್ರಿ ಕಳ್ಳತನಮಾಡುವುದಕ್ಕೆ ಹೋಗುವ ಸಮಯದಲ್ಲಿ ಕತ್ತಲೆಯಲ್ಲಿ ನಡೆಯುವಾಗ ನನ್ನ ಕಾಲಿಗೆ ಹಾವು ಸುತ್ತಿಕೊಂಡಿದೆ. ಆಗ ನಾನು ಕದಲದೆ ನಿಂತು ದೇವರನ್ನು ನೆನಪಿಸಿಕೊಂಡೆನು. ಕೆಲವು ನಿಮಿಷಗಳ ನಂತರ ಆ ಹಾವು ನನ್ನ ಕಾಲನ್ನು ಬಿಟ್ಟು ಹೋಯಿತು. ನನ್ನನ್ನು ಕಚ್ಚದಂತೆ ಬಿಟ್ಟು ಹೋಗುವಂತೆ ದೇವರೇ ಮಾಡಿದ್ದಾನೆ. ನಾನು ಮಾಡುವ ಕೆಲಸ ದೇವರು ಒಪ್ಪಿಕೊಳ್ಳದೆಹೋದರೇ ಹಾವು ಕಚ್ಚುತ್ತಿತ್ತು ಅಲ್ಲವೇ! ಇದನ್ನನುಸರಿಸಿ ನೋಡಿದರೆ ನಾನು ಮಾಡುವ ಕೆಲಸ ದೇವರಿಗೆ ಕೂಡ ಒಪ್ಪಿಗೆ ಅಲ್ಲವೇ!" ಎಂದನು. ಈ ವಿಧವಾಗಿ ಆತನು ಹೇಳಿದ ಮಾತುಗಳು ಕೇಳಿದ ನಂತರ ಯಾರು ಮಾಡುವ ಕೆಲಸ ಅವನಿಗೆ ಒಳ್ಳೆಯದಾಗಿಯೇ ಕಾಣಿಸುತ್ತಿರುತ್ತದೆಯೆಂದು ತಿಳಿಯುತ್ತಿದೆ. ಆದ್ದರಿಂದ ಯಾರು ಎಷ್ಟು ಭಯಂಕರವಾದ ಪಾಪದ ಕೆಲಸವನ್ನು ಮಾಡಿದರು ತನ್ನದು ಒಳ್ಳೆಯ ಕೆಲಸವೇಯೆಂದು ತಿಳಿದುಕೊಳ್ಳುತ್ತಿದ್ದಾರೆ.

ಮನುಷ್ಯ ಮಾಡುವ ಕಾರ್ಯಗಳಲ್ಲಿ ಪ್ರಪಂಚಕ್ಕೆ ಸಂಬಂಧವಾಗಿರುವವು ಕೆಲವು ಇರುವಾಗ, ದೈವಕ್ಕೆ ಸಂಬಂಧವಾಗಿರುವವು ಕೆಲವು ಇರುತ್ತವೆ. ಕಾರ್ಯಗಳನ್ನು ಎರಡಾಗಿ ವಿಭಜಿಸಿಕೊಳ್ಳದೇ, ಪ್ರಪಂಚ ಕೆಲಸವನ್ನು ಪರಮತ್ಮನೊಂದಿಗೆ, ಪರಮಾತ್ಮನ ಕೆಲಸವನ್ನು ಪ್ರಪಂಚದೊಂದಿಗೆ ಸೇರಿಸಿ ನೋಡಬಾರದು. ಪ್ರಪಂಚ ವಿಷಯವನ್ನು ಪ್ರಪಂಚಜ್ಞಾನದೊಂದಿಗೇ ಪರಿಹರಿಸಬೇಕು. ಹಾಗೇ ಪರಮಾತ್ಮ ವಿಷಯವನ್ನು ದೈವಜ್ಞಾನದಿಂದಲೇ

ಪರಿಹರಿಸಬೇಕು. ಹಾಗಲ್ಲದೆ ಪ್ರಪಂಚ ಕಾರ್ಯವಾದ ಕಳ್ಳತನವನ್ನು ದೇವರೊಂದಿಗೆ ಸಂಬಂಧವಿಡುವುದು ಸರಿಯಾದ ಪದ್ಧತಿಯಲ್ಲ. ದೇವರ ವಿಧಾನದಲ್ಲಿ ತಪ್ಪು ಮಾಡಿದವನು ಪ್ರಪಂಚ ಜ್ಞಾನದೊಂದಿಗೆ ಪ್ರಪಂಚ ವಿಧಾನದೊಂದಿಗೆ ಹೋಲಿಸಿಕೊಂಡು ತಾನು ಮಾಡಿದ ಕೆಲಸವನ್ನು ದೇವರು ಒಪ್ಪಿಕೊಳ್ಳುವನು ಎನ್ನುವುದು ಕೂಡ ಸರಿಯಾದ ಪದ್ಧತಿಯಲ್ಲ. ಪ್ರತಿದಿನವು ಮನುಷ್ಯನಾದವನು ಹೆಚ್ಚಾಗಿ ಪ್ರಪಂಚ ವಿಷಯಗಳಲ್ಲಿಯೇ ಇರುವನು. ಪ್ರಪಂಚ ವ್ಯಾಪಾರ ವಿಷಯಗಳಲ್ಲಿ ಕೆಲವುದರಲ್ಲಿ ಲಾಭ, ಕೆಲವುದರಲ್ಲಿ ನಷ್ಟ ಬರುವುದು ನಡೆಯುತ್ತಿರುತ್ತದೆ. ಆದರೆ ಲಾಭ ಬಂದಾಗ ಪ್ರತಿ ಮನುಷ್ಯ ತನ್ನ ಬುದ್ಧಿವಂತಿಕೆಯಿಂದ, ತಾನು ಮಾಡಿದ ವಿಧಾನದಿಂದ ಲಾಭ ಬಂದಿರುವು ದೆಂದುಕೊಳ್ಳುವನು. ಒಂದುವೇಳೆ ನಷ್ಟ ಬಂದರೆ ತನಗೆ ದೇವರು ಅನ್ಯಾಯ ಮಾಡಿರುವನೆಂದು ತಿಳಿದುಕೊಳ್ಳುತ್ತಾನೆ. ವ್ಯಾಪಾರ ವಿಷಯಗಳು ಪ್ರಪಂಚಕ್ಕೆ ಸಂಬಂಧಿಸಿದವು. ಆದ್ದರಿಂದ ದೇವರು ಅನ್ಯಾಯ ಮಾಡಿರುವನೆಂದು ಹೇಳುವುದು ಸರಿಯಾದ ಪದ್ಧತಿಯಲ್ಲ. ಹಾಗೆಯೇ ಒಂದು ಕುಟುಂಬವು ಸಂತೋಷದಿಂದ ಬದುಕುತ್ತಿರುವಾಗ ತಮ್ಮನ್ನು ದೇವರು ಚೆನ್ನಾಗಿ ನೋಡುತ್ತಿರುವನೆಂದು ಹೇಳುತ್ತಿರುತ್ತಾರೆ. ಒಂದುವೇಳೆ ಕುಟುಂಬದಲ್ಲಿ ಒಬ್ಬ ವ್ಯಕ್ತಿ ಅಕಸ್ಮಾತ್ತಾಗಿ ಮೃತಪಟ್ಟರೆ ಆಗ ದೇವರು ಆ ವ್ಯಕ್ತಿಯನ್ನು ಸಾಯಿಸಿದ್ದಾನೆಂದು ದೇವರು ನಮಗೆ ಅನ್ಯಾಯ ಮಾಡಿದನೆಂದು ಹೇಳುತ್ತಿರುತ್ತಾರೆ. ಇಲ್ಲಿಯೂ ಕೂಡ ಬದುಕುವ ವಿಧಾನ, ಸಾಯುವುದು, ಹುಟ್ಟುವುದು ಪ್ರಪಂಚ ವಿಷಯವಾಗುತ್ತದೆ. ಅವೆಲ್ಲವೂ ಕರ್ಮವನ್ನು ಅನುಸರಿಸಿ ನಡೆಯುತ್ತಿರುತ್ತವೆ. ದೇವರಿಗೆ ಯಾವ ಸಂಬಂಧವಿಲ್ಲ. ಆದರೂ ಮನುಷ್ಯ ವಿಚಕ್ಷಣ ಇಲ್ಲದೆ ಪ್ರಪಂಚ ವಿಷಯವನ್ನು ದೇವರೊಂದಿಗೆ ಸಂಬಂಧ ಕಲ್ಪಿಸುತ್ತಿದ್ದಾನೆ.

ಭೂಮಿ ಮೇಲೆ ಬಹಳಜನ ಪ್ರಪಂಚದ ವಿಷಯಕ್ಕು, ಪರಮಾತ್ಮ ವಿಷಯಕ್ಕು ಭೇದ ತಿಳಿಯದೆ ಎರಡನ್ನು ಒಂದೇ ವಿಧವಾಗಿ ಹೋಲಿಸಿಕೊಳ್ಳುವು ದರಿಂದ ಮನುಷ್ಯ, ದೇವರ ವಿಷಯವನ್ನು ಪ್ರಪಂಚ ವಿಷಯದೊಂದಿಗೂ,

ಪ್ರಪಂಚ ವಿಷಯುವನ್ನು ದೇವರ ವಿಷಯುದೊಂದಿಗೂ ಸಂಬಂಧ ವಿಟ್ಟುಕೊಳ್ಳುತ್ತಿದ್ದಾನೆ. ಇದು ಒಳ್ಳೆಯದಲ್ಲವೆಂದು ಯಾರಾದರೂ ತಿಳಿದವನು ಹೇಳಿದರೂ ಕೇಳದ ಸ್ಥಿತಿಯಲ್ಲಿ ಮನುಷ್ಯ ಇದ್ದಾನೆ. ಮನುಷ್ಯನಿಗೂ ದೇವರ ವಿಷಯಕ್ಕೂ ಪ್ರಾಪಂಚಿಕ ವಿಷಯಕ್ಕೂ ಭೇದ ತಿಳಿಯದೇಹೋಗಿದೆ. ಕೆಲವುಕಡೆ ಪ್ರಪಂಚದ ವಿಷಯವನ್ನು ದೇವರ ವಿಷಯವಾಗಿ, ದೇವರ ವಿಷಯವನ್ನು ಪ್ರಪಂಚದ ವಿಷಯವನ್ನಾಗಿ ಹೋಲಿಸಿಕೊಳ್ಳುವುದು ಕೂಡ ನಡೆಯುತ್ತಿದೆ. ತಾನು ಏನೆಂದುಕೊಂಡರೆ ಅದೇ ಸರಿಯಾದುದೆಂದು ಮನುಷ್ಯ ಅಂದು ಕೊಳ್ಳುತ್ತಿದ್ದಾನೆ. ಮನುಷಯ ಹೇಗೆ ತಪ್ಪುಮಾಡುತ್ತಿರುವನೋ ಒಂದು ಚಿಕ್ಕ ಉದಾಹರಣೆಯಿಂದ ಹೇಳಿಕೊಳ್ಳೋಣ. “ಮುದ್ದು” ಎಂಬ ಮಾತು ಸರ್ವ ಸಾಧಾರಣವಾಗಿ ಎಲ್ಲರಿಗೂ ತಿಳಿದಿದೆ. ಮುದ್ದು ಎನ್ನುವುದು ಒಂದೇ ಆದರೂ ಅದನ್ನು ಮನುಷ್ಯ ಎರಡು ವಿಧಗಳಾಗಿ ವಿಭಜಿಸಿಕೊಂಡಿದ್ದಾನೆ. ಮುದ್ದನ್ನು ಕುರಿತು ಪೂರ್ತಿಯಾಗಿ ವಿವರಿಸಿಕೊಂಡು ನೋಡಿದರೆ ಅದರ ವಿವರವು ಹೀಗಿರುವುದು. ಮೆತ್ತಗೆ ಮುಟ್ಟಿಕೊಳ್ಳುವುದನ್ನು ಮುದ್ದು ಎಂದು ಹೇಳಬಹುದು. ನಿಧಾನವಾಗಿ ಅಥವಾ ಮೆತ್ತಗೆ ಅಥವಾ ಸಣ್ಣಗೆ ತಾಕುವುದು ಮುದ್ದು ಎಂದು ಹೇಳುವುದಕ್ಕೆ ಕಾರಣವಿದೆ. ಎಲ್ಲಿಯಾದರೂ ಜೋರಾಗಿ ಅಥವಾ ವೇಗವಾಗಿ ಅಥವಾ ಬಲವಾಗಿ ತಾಕುವುದನ್ನು ಗುದ್ದು ಎನ್ನುತ್ತೇವೆ. ವೇಗವಾಗಿ, ಬಲವಾಗಿ ತಾಕಿದ ಅದನ್ನು ಗುದ್ದು ಎಂದಾಗ ಅದಕ್ಕೆ ಪೂರ್ತಿ ವಿರುದ್ಧವಾಗಿ ಇರುವುದು ಮುದ್ದು ಆಗಿದೆ. ಗುದ್ದಿಗು ಅದಕ್ಕೆ ವಿರುದ್ಧವಾದ ಮುದ್ದಿಗು ಹತ್ತಿರ ಸಂಬಂಧವಾದ ಹೆಸರುಗಳು ಕೂಡ ಇವೆ. ಮುದ್ದನ್ನು ಮುಟ್ಟಿಕೊಳ್ಳುವುದು ಅಥವಾ ತಾಕುವುದೆಂದು ಎನ್ನಬಹುದು. ಹಾಗೆಯೇ ಗುದ್ದನ್ನು ಒದೆಯುವುದು ಅಥವಾ ಹೊಡೆಯುವುದು ಎನ್ನಬಹುದು.

ಒಬ್ಬನು ಮತ್ತೊಬ್ಬನ ಶರೀರದ ಮೇಲೆ ಎಲ್ಲಿ ಹೊಡೆದರೂ ಅದು ಗುದ್ದುವುದೇ ಆಗುತ್ತದೆ. ಅದೇ ವಿಧವಾಗಿ ಒಬ್ಬನು ಮತ್ತೊಬ್ಬನ ಶರೀರದ ಮೇಲೆ ಎಲ್ಲಿ ತಾಕಿದರೂ ಅಥವಾ ಮುಟ್ಟಿಕೊಂಡರೂ ಅದು ಮುದ್ದೇ ಆಗುತ್ತದೆ.

ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನನ್ನು ತನ್ನ ಕೈಯಿಂದಾಗಲಿ, ಅಥವಾ ತನ್ನ ಕಾಲಿನಿಂದಾಗಲಿ ಬಲವಾಗಿ ತಾಕಿದರೆ ಅಥವಾ ಬಲವಾಗಿ ಒದ್ದರೆ ಅದನ್ನು ಗುದ್ದು ಎನ್ನುತ್ತೇವೆ ಅಲ್ಲವೇ! ಆ ವಿಧವಾಗಿ ಶರೀರದ ಮೇಲೆ ಎಲ್ಲಿ ಒದ್ದರೂ ಅದನ್ನು ಗುದ್ದೇ ಎನ್ನುತ್ತೇವೆ. ಶರೀರದ ಮೇಲೆ ಯಾವ ಭಾಗದ ಮೇಲೆ ಬಲವಾಗಿ ಒದ್ದರೂ ಅದು ಗುದ್ದಾಗಿ ಪರಿಗಣಿಸಲ್ಪಟ್ಟಹಾಗೆ, ಒಬ್ಬರ ಶರೀರದ ಮೇಲೆ ಮತ್ತೊಬ್ಬರು ಮೆತ್ತಗೆ ಎಲ್ಲಿ ಮುಟ್ಟಿಕೊಂಡರೂ ಅದು ಮುದ್ದೇ ಆಗುತ್ತದೆ. ಕೈಯಿಂದಾಗಲಿ, ಕಾಲಿನಿಂದಾಗಲಿ, ಇತರರ ಶರೀರದ ಮೇಲೆ ತಲೆಯ ಮೇಲೆ ಒದ್ದರೂ, ಬೆನ್ನಿನ ಮೇಲೆ ಒದ್ದರೂ, ಮುಖದ ಮೇಲೆ ಒದ್ದರೂ, ಹೊಟ್ಟೆಯ ಮೇಲೆ ಒದ್ದರೂ, ಕಾಲಿನ ಮೇಲೆ ಒದ್ದರೂ ಅದನ್ನು ಗುದ್ದುವುದೆಂದು ಹೇಳಬಹುದು. ಹಾಗೆಯೇ ಒಬ್ಬ ಮನುಷ್ಯನನ್ನು ಮತ್ತೊಬ್ಬ ಮನುಷ್ಯ ಕೈನಿಂದಾಗಲಿ, ಕಾಲಿನಿಂದಾಗಲಿ ಮೆತ್ತಗೆ ತಲೆಯಮೇಲೆ ತಾಕಿದರೂ, ಮುಖದ ಮೇಲೆ ತಾಕಿದರೂ, ಹೊಟ್ಟೆಯ ಮೇಲೆ ತಾಕಿದರೂ, ಬೆನ್ನ ಮೇಲೆ ತಾಕಿದರೂ, ಕೈಯಮೇಲೆ ತಾಕಿದರೂ, ಕಾಲಿನ ಮೇಲೆ ತಾಕಿದರೂ ಅದು ಮುದ್ದೇ ಆಗುತ್ತದೆ. ಒಬ್ಬ ಮನುಷ್ಯನನ್ನು ಮತ್ತೊಬ್ಬ ಮನುಷ್ಯ ಬಲವಾಗಿ ಗುದ್ದುವುದಕ್ಕಾಗಿ ಕೈಗಳು, ಕಾಲುಗಳನ್ನೇ ಉಪಯೋಗಿಸಬೇಕಾಗಿ ಬರುತ್ತದೆ. ಗುದ್ದಿನಲ್ಲಿ ಬಲವು ಉಪಯೋಗಿಸಲ್ಪಡುತ್ತಿದೆ ಆದಕಾರಣ ಅಲ್ಲಿ ಕಾಲುಗಳನ್ನಾಗಲಿ, ಕೈಗಳನ್ನಾಗಲಿ ಉಪಯೋಗಿಸಬೇಕಾಗಿರುತ್ತದೆ. ಅದೇ ಮುದ್ದಿನಲ್ಲಾದರೆ ಬಲವನ್ನು ಉಪಯೋಗಿಸಬೇಕಾದ ಅವಶ್ಯಕತೆಯಿಲ್ಲ, ಆದಕಾರಣ ಕಾಲುಗಳನ್ನು, ಕೈಗಳನ್ನೇ ಅಲ್ಲದೇ ಶರೀರದಲ್ಲಿನ ತುಟಿಗಳನ್ನು ಉಪಯೋಗಿಸುವುದು ಕೂಡಾ ನಡೆಯುತ್ತಿದೆ.

ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನನ್ನು ಶರೀರದಲ್ಲಿನ ಯಾವ ಭಾಗದೊಂದಿಗಾದರೂ ಮೆತ್ತಗೆ ತಾಕಬಹುದು. ಹಾಗೆಯೇ ಬಲವಾಗಿ ಕೂಡ ತಾಕಬಹುದು. ಬಲವಾಗಿ ತಾಕಿದಾಗ ಮನುಷ್ಯನಲ್ಲಿನ ಗುಣಗಳ ಪ್ರಭಾವವು ಬೇರೆಯಾಗಿ ಇರುತ್ತದೆ. ಹಾಗೆಯೇ ಮೆತ್ತಗೆ ತಾಕಿದಾಗ ಕೂಡ ತಾಕಿದ ಮನುಷ್ಯನಲ್ಲಿನ ಗುಣ ಪ್ರಭಾವವು ಬೇರೆಯಾಗಿರುತ್ತದೆ. ಕೋಪದಿಂದಾಗಲಿ

ಮತ್ತು ಅಸೂಯದಿಂದಾಗಲಿ ಮನುಷ್ಯನಲ್ಲಿ ಶತ್ರುತ್ವ ಬೆಳೆದು ಅದು ಗುದ್ದುವರೆಗು ಪ್ರೇರಣೆ ಮಾಡುವುದು. ಹಾಗೆಯೇ ಮನುಷ್ಯನಲ್ಲಿ ಮೋಹವು, ಪ್ರೇಮವು ಬೆಳೆದಾಗ ಆ ಗುಣ ಪ್ರೇರಣೆ ಮುದ್ದುವರೆಗು ಹೋಗುವುದು. ತಾಯಿ ತನ್ನ ಮಗುವನ್ನು ಪ್ರೇಮದಿಂದ ಮುದ್ದಾಡುವುದು ನೋಡುತ್ತಲೇ ಇದ್ದೇವೆ. ಹಾಗೆಯೇ ಒಬ್ಬನು ಮತ್ತೊಬ್ಬನನ್ನು ಕೋಪದಿಂದ ಹೊಡೆಯುವುದು ನೋಡುತ್ತಿದ್ದೇವೆ. ಮೊದಲು ಮೋಹವು ಪ್ರೇಮವನ್ನು ಬೆಳೆಸುವುದು, ಹಾಗೆಯೇ ಮೊದಲು ಅಸೂಯೆ ಕೋಪವನ್ನು ಬೆಳೆಸುವುದು. ಒಂದು ಗುದ್ದಿನ ಹಿಂದೆ ಹಾಗೆಯೇ ಒಂದು ಮುದ್ದಿನ ಹಿಂದೆ ಇಷ್ಟು ಸಮಾಚಾರವಿದೆ.

ಪ್ರಪಂಚ ಕಾರ್ಯಕ್ಕು ಹಾಗೂ ಪರಮಾತ್ಮ ಕಾರ್ಯಕ್ಕು ಇರುವಂತಹ ವ್ಯತ್ಯಾಸ ತಿಳಿಯದ ಮನುಷ್ಯ ಪ್ರಪಂಚದ ವಿಷಯವನ್ನು ಕೂಡ ಪರಮಾತ್ಮನ ವಿಷಯವಾಗಿ ಹೋಲಿಸಿಕೊಂಡು, ತನ್ನ ನಿರ್ಣಯ ಸರಿಯಾದುದೆಂದು, ತನಗೆ ತಿಳಿದಷ್ಟು ಇತರರಿಗೆ ತಿಳಿದಿಲ್ಲವೆಂದುಕೊಳ್ಳುತ್ತಿದ್ದಾನೆ. ಮುದ್ದಿಗು ಹಾಗೂ ಗುದ್ದಿಗು ಎಷ್ಟೋ ವ್ಯತ್ಯಾಸವಿರುವಂತೆ ಪ್ರಪಂಚ ವಿಷಯಕ್ಕು ಹಾಗೂ ಪರಮಾತ್ಮನ ವಿಷಯಕ್ಕು ಅಷ್ಟೇ ವ್ಯತ್ಯಾಸವಿದೆ. ಇದು ಪರಮಾತ್ಮ ವಿಷಯವೆಂದು ನಿರ್ಧರಿಸಿ ಹೇಳುವುದಕ್ಕೆ ಅದರ ಹಿಂದೆ ಬ್ರಹ್ಮವಿದ್ಯಾಶಾಸ್ತ್ರವಿದೆ. ಹಾಗೆಯೇ ಇದು ಪ್ರಪಂಚ ವಿಷಯವೆಂದು ನಿರ್ಧರಿಸಿ ಹೇಳುವುದಕ್ಕೆ ಅದರ ಹಿಂದೆ ಗಣಿತ, ಖಗೋಳ, ರಸಾಯನ, ಭೌತಿಕ ಎಂಬ ನಾಲ್ಕು ಶಾಸ್ತ್ರಗಳಿವೆ. ಆದರೆ ಒಬ್ಬ ಮನುಷ್ಯ ದೈವ ವಿಷಯವನ್ನು ಹೇಳುವಾಗ, ಇದು ದೈವ ವಿಷಯವಾ ಅಲ್ಲವಾ ಎಂದು ಬ್ರಹ್ಮವಿದ್ಯಾಶಾಸ್ತ್ರದೊಂದಿಗೆ ಹೋಲಿಸಿ ನೋಡಿಕೊಳ್ಳಲಿಲ್ಲ. ಹಾಗೆಯೇ ಪ್ರಪಂಚ ವಿಷಯವನ್ನು ಕುರಿತು ಮಾತನಾಡುವಾಗ, ಇದು ಪ್ರಪಂಚ ವಿಷಯವಾ ಅಲ್ಲವಾ ಎಂದು ನೋಡದೆ, ಯಾವ ಶಾಸ್ತ್ರದೊಂದಿಗೂ ಸಂಬಂಧವಿಲ್ಲದೇ ವ್ಯರ್ಥವಾಗಿ ಮಾತನಾಡುತ್ತಿದ್ದಾನೆ. ಇತ್ತ ಪ್ರಪಂಚ ಸಂಬಂಧವೂ ಅಲ್ಲದೆ, ಅತ್ತ ಪರಮಾತ್ಮ ಸಂಬಂಧವೂ ಅಲ್ಲದೆ ಮತನಾಡುವ ಮಾತುಗಳನ್ನು ವ್ಯರ್ಥ ಪ್ರಲಾಪಗಳು ಎನ್ನುತ್ತೇವೆ.

ಪ್ರಪಂಚ ವಿಷಯಗಳಲ್ಲಿ ಅವಶ್ಯಕವಿಲ್ಲದೇ ಅನವಶ್ಯಕವಾಗಿ ಮಾತನಾಡುವವನನ್ನು ಮೂರ್ಖ ಎನ್ನುತ್ತೇವೆ. ಹಾಗೆಯೇ ಪರಮಾತ್ಮನ ವಿಷಯದಲ್ಲಿ ಅಜ್ಞಾನಿಯಾಗಿ ಮಾತನಾಡುವವನನ್ನು ಮೂಢನು ಎನ್ನುತ್ತೇವೆ. ಎರಡರಲ್ಲಿಯೂ ಶಾಸ್ತ್ರಬದ್ಧತೆ ಇಲ್ಲದೇ ಮಾತನಾಡುವವನನ್ನು ಮೂರ್ಖನು ಮತ್ತು ಮೂಢನು ಎಂದು ಹೇಳಬಹುದು. ಇನ್ನೊಂದು ವಿಧವಾಗಿ ಹೇಳಿದರೆ ಮುದ್ದಿಗು ಗುದ್ದಿಗು ವ್ಯತ್ಯಾಸ ತಿಳಿಯದವನನ್ನು ಪ್ರಪಂಚ ಸಂಬಂಧವಾಗಿ ಮೂರ್ಖನೆಂದು ಹೇಳಬಹುದು. ಹಾಗೆಯೇ ಜ್ಞಾನಕ್ಕು ಅಜ್ಞಾನಕ್ಕು ವ್ಯತ್ಯಾಸ ತಿಳಿಯದವನನ್ನು ಜ್ಞಾನ ಸಂಬಂಧವಾಗಿ ಅಥವಾ ದೈವ ಸಂಬಂಧವಾಗಿ ಮೂಢನೆಂದು ಹೇಳಬಹುದು. ಒಬ್ಬ ಕವಿ ತನ್ನ ಪದ್ಯದಲ್ಲಿ ಪ್ರಪಂಚ ಸಂಬಂಧ ಮೂರ್ಖನನ್ನು ಕುರಿತು ಹೇಳುತ್ತಾ "ಮೊಲದ ಕೋಡನ್ನು ಹುಡುಕುವವನು, ಮರುಭೂಮಿಯಲ್ಲಿ ನೀರನ್ನು ಹುಡುಕುವವನು, ಮರಳಿನಲ್ಲಿ ತೈಲವನ್ನು ತೆಗೆಯಬಹುದು ಎಂದುಕೊಳ್ಳುವವನು ಪೂರ್ತಿ ಮೂರ್ಖನೆಂದು" ಹೇಳಿದ್ದಾನೆ. ಹಾಗೆಯೇ ಕೆಲವರು ಹಿರಿಯರು ತಮ್ಮ ಮಾತುಗಳಲ್ಲಿ ದೈವ ಸಂಬಂಧ ಮೂಢರನ್ನು ಕುರಿತು ಹೀಗೆ ಹೇಳಿದ್ದಾರೆ. "ದೇವತೆಗಳಲ್ಲಿ ದೇವರನ್ನು ಹುಡುಕುವವನು, ಭಜನೆಯಲ್ಲಿ ಜ್ಞಾನವಿದೆಯೆಂದುಕೊಳ್ಳುವವನು, ಬದುಕಿದ್ದಾಗಲೇ ಮೋಕ್ಷವನ್ನು ಹೊಂದಬಹುದೆಂದುಕೊಳ್ಳುವವನು, ಪೂರ್ತಿ ಮೂಢನೆಂದು ಹೇಳಬಹುದು." ಇಂದಿನ ಕಾಲದಲ್ಲಿ ಹೆಚ್ಚಾಗಿ ಮೂಢರು, ಕಡಿಮೆಯಾಗಿ ಮೂರ್ಖರು ಇದ್ದಾರೆಂದು ಹೇಳುತ್ತಿದ್ದೇವೆ.

ದೇವರ ವಿಷಯವನ್ನು ಪ್ರಪಂಚ ವಿಷಯವಾಗಿ ಲೆಕ್ಕಿಸಿ, ತನಗೆ ತಿಳಿದ ಪ್ರಪಂಚ ವಿಷಯವನ್ನೇ ದೇವರ ವಿಷಯವಾಗಿ ಲೆಕ್ಕಿಸುವವರು ಬಹಳಜನರಿದ್ದಾರೆ. ಅವರೆಲ್ಲರನ್ನು ಮೂಢರೆಂದು ಹೇಳಬಹುದು. ಕೆಲವರು ಪ್ರಪಂಚ ಸಂಬಂಧವಾದ ಮತವನ್ನು ಆಧಾರ ಮಾಡಿಕೊಂಡು ಅದನ್ನೇ ದೇವರ ವಿಷಯವಾಗಿ ಲೆಕ್ಕಿಸುತ್ತಿರುವರು. ಮತ ಎನ್ನುವುದು ಎಂದಿಗೂ ದೇವರ ವಿಷಯವಲ್ಲ, ಆದಕಾರಣ ಅಂಥವರನ್ನು ಕೂಡ ಮೂಢರೆಂದೇ ಹೇಳಬಹುದು. ಕೆಲವರು

ಮತವನ್ನು ಅನುಸರಿಸಿ ದೈವಜ್ಞಾನವಿರಬೇಕೆಂಬ ವಾದನೆಯನ್ನು ಪ್ರೇರೇಪಿಸುತ್ತಿದ್ದಾರೆ. ಮತಕ್ಕು ದೈವಜ್ಞಾನಕ್ಕು ಸಂಬಂಧ ಇಡುವವರನ್ನು ಮೂಢರೆಂದೇ ಹೇಳಬೇಕು. ಪ್ರಪಂಚದಲ್ಲಿ ದೇವರು ಒಬ್ಬನೇ, ದೈವಜ್ಞಾನವು ಒಂದೇ ಇದೆ. ಆದರೆ ಮತವನ್ನು ಅನುಸರಿಸಿ ದೇವರು, ದೈವಜ್ಞಾನವನ್ನು ನಿರ್ಣಯಿಸುವುದು ಪೂರ್ತಿ ತಪ್ಪೆಂದು, ಪೂರ್ತಿ ಅಜ್ಞಾನವೆಂದು ಮೂಢರಾದವರಿಗೆ ತಿಳಿದಿಲ್ಲ.

ಪ್ರಪಂಚವನ್ನು ಸೃಷ್ಠಿಸಿದ ಸೃಷ್ಠಿಕರ್ತ ಒಬ್ಬನೇ ಇರುವನು. ಆತನನ್ನೇ ದೇವರು ಎನ್ನುತ್ತಿದ್ದೇವೆ. ದೇವರು ಮನುಷ್ಯರಿಗೆ ತಿಳಿಯಲ್ಪಡುವ ಕಾರಣದಿಂದ ತನಗೆ ಕೆಲವು ಧರ್ಮಗಳನ್ನು ಏರ್ಪಡಿಸಿಕೊಂಡಿದ್ದಾನೆ. ದೇವರ ಧರ್ಮಗಳನ್ನು ತಿಳಿದವನು ದೇವರನ್ನು ತಿಳಿಯಬಹುದು. ದೇವರ ಧರ್ಮಗಳನ್ನು ತಿಳಿಯದವನು ದೇವರನ್ನು ಎಂದಿಗೂ ತಿಳಿಯಲಾರನು. ಆದರೆ ಕೆಲವರು ಮನುಷ್ಯರು ದೇವರ ಧರ್ಮಗಳನ್ನು ಎಷ್ಟುಮಾತ್ರ ತಿಳಿಯದೇ ದೇವರು ಈತನೇ ಎಂದು, ದೇವರ ಜ್ಞಾನವು ಇದೇಯೆಂದು ಹೇಳುತ್ತಿರುವರು. ಅವರು ಊಹಿಸಿಕೊಂಡವನೇ ದೇವರು, ಅವರಿಗೆ ತಿಳಿದಿರುವುದೇ ದೇವರ ಜ್ಞಾನವೆನ್ನುತ್ತಿದ್ದಾರೆ. ವಾಸ್ತವವಾಗಿ ದೇವರ ವಿಷಯವು ಯಾವುದೋ, ಪ್ರಪಂಚ ವಿಷಯವು ಯಾವುದೋ, ಅವುಗಳ ವ್ಯತ್ಯಾಸ ಏನೋ, ಅವರಿಗೆ ತಿಳಿಯದೆಂದೇ ಹೇಳಬಹುದು. ಅಂಥವರನ್ನು ಮೂರ್ಖರೆಂದೂ ಮತ್ತು ಮೂಢರೆಂದೂ ಹೇಳಬಹುದು.

ಈದಿನ ಪ್ರಪಂಚ ವ್ಯಾಪ್ತವಾಗಿ ಹನ್ನೆರಡು (12) ಮತಗಳಿವೆ. ಅದರಲ್ಲಿ ಮುಖ್ಯವಾದವುಗಳು ಮತ್ತು ದೊಡ್ಡವು ಮೂರು ಮತಗಳು ಮಾತ್ರವೇ ಇವೆ. ಆ ಮೂರು ಮತಗಳಲ್ಲಿ ಸಂಖ್ಯೆಯಲ್ಲಿ ದೊಡ್ಡದು ಕ್ರೈಸ್ತವ ಮತ. ಎರಡನೆಯ ಸ್ಥಾನದಲ್ಲಿರುವುದು ಇಸ್ಲಾಮ್ ಮತ (ಮುಸ್ಲಿಮ್ ಮತ), ಮೂರನೆಯ ಸ್ಥಾನದಲ್ಲಿರುವುದು ಹಿಂದೂ (ಇಂದೂ) ಮತ. ಎಲ್ಲದಕ್ಕಿಂತಲೂ ಮೊದಲು ಹುಟ್ಟಿರುವುದು ಇಂದೂ ಮತ. ನಂತರ ಹುಟ್ಟಿರುವುದು ಕ್ರೈಸ್ತವ ಮತ. ಆ ನಂತರ ಹುಟ್ಟಿರುವುದು ಇಸ್ಲಾಮ್ ಮತ. ಹುಟ್ಟುವಿಕೆಯಲ್ಲಿ ಮೊದಲನೆಯದು ಮತ್ತು ಸೃಷ್ಠಿ ಆದಿಯಿಂದ ಹೆಚ್ಚು ಸಂಖ್ಯೆಯಲ್ಲಿರುವುದು ಇಂದೂ ಮತವೇ.

ಆದರೇ ಈದಿನದ ಸಂಖ್ಯಾ ಬಲದಲ್ಲಿ ಇಂದೂ ಮತವು ಮೂರನೆಯ ಸ್ಥಾನದಲ್ಲಿ ಉಳಿದಿದೆ. ದೈವಜ್ಞಾನದಲ್ಲಿ ಮೊದಲು ಹುಟ್ಟಿರುವುದು ಇಂದೂ ಮತವೆಂದು ಹೇಳಿದರೂ ಮೊದಲು ಇದಕ್ಕೆ ಮತವೆಂಬ ಹೆಸರಿಲ್ಲ. ಮೊದಲು ಇಂದೂ ಎಂದು ಚಂದ್ರನ ಹೆಸರಿನೊಂದಿಗೆ ನೆಲೆಗೊಳಿಸಲ್ಪಟ್ಟ ಜ್ಞಾನ ಇಂದೂಜ್ಞಾನ. ಚಂದ್ರನು ಜ್ಞಾನಕ್ಕೆ ಚಿಹ್ನೆ (ಸಂಕೇತ) ಮತ್ತು ಜ್ಯೋತಿಷ್ಯ ಶಾಸ್ತ್ರಪ್ರಕಾರ ಜ್ಞಾನಕ್ಕೆ ಅಧಿಪತಿ. ಆದ್ದರಿಂದ ಸೃಷ್ಠಿ ಆದಿಯಲ್ಲಿ ಇಂದೂ ಎಂದು ಹೆಸರಿಟ್ಟು ದೇವರ ಧರ್ಮಗಳು ಹೇಳಲ್ಪಟ್ಟಿವೆ. ಆದ್ದರಿಂದ ಸೃಷ್ಠಿ ಆದಿಯಲ್ಲಿಯೇ ಇಂದೂ ಧರ್ಮಗಳು ಹೊರಗೆ ಬಂದಾಗ, ಈ ಮಧ್ಯ ಕಾಲದಲ್ಲಿ ಎರಡು ಮೂರು ಸಾವಿರವರ್ಷಗಳಿಂದ ಉಳಿದ ಮತಗಳು ಹುಟ್ಟಿ ಬಂದಿವೆ. ಉಳಿದ ಮತಗಳು ಹುಟ್ಟಿದ ನಂತರ ಮೊದಲು ಇಂದೂ ಧರ್ಮವೆಂದು ಹೇಳಲಾಗಿರುವುದನ್ನು ಇಂದೂ ಮತವೆಂದು ಹೇಳುತ್ತಾ ಬಂದಿದ್ದಾರೆ. ಉಳಿದ ಮತಗಳ ಪಕ್ಕದಲ್ಲಿ ಇಂದೂ ಧರ್ಮವನ್ನು ಕೂಡ ಇಂದೂ ಮತವೆಂದು ಹೇಳುವುದು ನಡೆದಿದೆ. ಇಂದೂ ಎನ್ನುವುದು ಮತವಲ್ಲದೇ ಹೋದರೂ ಮತವೆಂದು ಕರೆಯಲಾಗುತ್ತಿರುವುದು ಚಿಂತಿಸಬೇಕಾದ ವಿಷಯವಾದಾಗ, ಪೂರ್ತಿ ಅಳುವಂತಹ ವಿಷಯವು ಮತ್ತೊಂದಿದೆ. ಇಂದೂ ಧರ್ಮವು ಇಂದೂ ಮತವಾಗಿ ಬದಲಾಗುವುದೇ ಅಲ್ಲದೇ ಇಂದೂ ಮತವೆಂದು ಕರೆಯಲ್ಪಟ್ಟ ಹೆಸರು ಕೂಡ ಹೋಗಿ ಕೊನೆಗೆ ಈದಿನ ಹಿಂದೂಮತವಾಗಿ ಬದಲಾಗಿದೆ. ಒಂದುಬಾರಿಯೇನೋ ಇಂದೂ ಧರ್ಮದಲ್ಲಿ ಧರ್ಮವುಹೋಗಿ ಮತವಾಗಿ ಬದಲಾಗಿಹೋದರೆ, ನಂತರ ಕಾಲಕ್ರಮೇಣದಲ್ಲಿ ಇಂದೂಮತದಲ್ಲಿ 'ಇಂದೂ' ಹೋಗಿ 'ಹಿಂದೂ' ಆಗಿದೆ. ಈ ಮಧ್ಯೆ ನೂರು, ಎರಡು ನೂರು ವರ್ಷಗಳ ಹಿಂದೆ ಇಂದೂ ಶಬ್ಧವು ಹಿಂದೂ ಶಬ್ಧವಾಗಿ ಬದಲಾಗಿದೆ. ಮೊದಲು ಹುಟ್ಟಿರುವ ಇಂದೂಧರ್ಮ ಒಂದರ ಹೆಸರಿಗೇ ಭಂಗ ಏರ್ಪಟ್ಟಿದೆ. ಈ ದಿನ ಚರಿತ್ರೆ ತಿಳಿಯದ ಹಿಂದೂಗಳು ಎಷ್ಟುಮಾತ್ರ ಹಿಂತಿರುಗಿ ನೋಡದೆ ತಮ್ಮದು ಹಿಂದೂ ಮತವೆಂದು ಹೇಳಿಕೊಳ್ಳುತ್ತಿದ್ದಾರೆ. ಅರ್ಥದೊಂದಿಗೆ ಕೂಡಿಕೊಂಡಿರುವ ಇಂದೂ ಧರ್ಮವು ಈ ದಿನ ಅರ್ಥಹೀನವಾದ ಹಿಂದೂಮತವಾಗಿ ಉಳಿದುಕೊಂಡಿದೆ.

ಚರಿತ್ರೆಯನ್ನು ಹಿಂದಕ್ಕೆ ನೋಡಿದಾಗ, ಈದಿನದ ಹಿಂದೂಮತವು ಪೂರ್ವವು ಇಂದೂ ಧರ್ಮವಾಗಿ ಇದ್ದಿತೆಂದು ಹೇಳಿದರೂ, ಮೂರ್ಖರಾಗಿ ಕೆಲವರು ವಾದಿಸುತ್ತಾ ಇಲ್ಲಾ ಹಿಂದೂಮತವೆನ್ನುವುದೇ ಸರಿಯಾದುದೆಂದು ಅನ್ನುತ್ತಿದ್ದಾರೆ. ಕನಿಷ್ಟ ಹಿಂದೂಮತದಲ್ಲಿನ ಅರ್ಥವಿಲ್ಲದ ಹಿಂದೂ ಶಬ್ಧವನ್ನು ತೆಗೆದುಹಾಕಿ ಕೊನೆಗೆ ಇಂದೂಮತವೆಂದು ಹೇಳಿಕೊಳ್ಳಿರೆಂದು ಹೇಳಿದರೂ, ಇನ್ನೂ ಕೆಲವರು ಮೂಢವಾಗಿ ಮಾತನಾಡುತ್ತಾ ಹಿಂದೂಮತವೆನ್ನುವುದೇ ಮುಖ್ಯ, ಹಿಂದೂಮತ ಎನ್ನುವ ಹೆಸರು ಸನಾತನವಾದುದೆಂದು ಹೇಳುತ್ತಿದ್ದಾರೆ. ಕಲಿಯುಗದಲ್ಲಿ ಎರಡರಿಂದ ಮೂರು ಸಾವಿರವರ್ಷಗಳು ಕಳೆಯುವವರೆಗೂ ಮತವೆಂಬ ಹೆಸರೇ ಇಲ್ಲದಿದ್ದರೂ, ಹಿಂದೂ ಮತವು ಸನಾತನವಾದುದೆಂದು ಕೆಲವರೆನ್ನುವುದು ವಿಚಿತ್ರವಾಗಿ ಕಾಣಿಸುತ್ತಿದೆ. ವಾಸ್ತವವಾಗಿ ಹಿಂದೂ ಎನ್ನುವ ಪದಕ್ಕೆ ಅರ್ಥವಿಲ್ಲ. ಇಂದೂ ಎಂಬ ಪದಕ್ಕೆ ಚಂದ್ರನೆಂದು, ಜ್ಞಾನವೆಂದು ಅರ್ಥವಿದೆ. ಅರ್ಥವಿರುವ ಹೆಸರನ್ನು ಬಿಟ್ಟು, ಅರ್ಥವಿಲ್ಲದ ಹೆಸರನ್ನು ಸನಾತನ ಧರ್ಮವೆನ್ನುವುದರಲ್ಲಿ ಏನು ಸತ್ಯವಿರುವುದೆಂದು ನೋಡಿದರೇ, ತಮ್ಮ ಮಾತನ್ನು ಸಾಧಿಸಬೇಕೆಂಬ ವಾದವೆ ಹೊರತು ಅದರಲ್ಲಿ ಏನೂ ಇಲ್ಲವೆಂದು ತಿಳಿಯುತ್ತಿದೆ. "ನಾನು ಹಿಂದೂ  ನನ್ನ ಮತ ಹಿಂದೂಮತವು" ಎಂದು ಹೇಳುವುದರಲ್ಲಿ ಹಿಂದೂ ಮತದ ಮೇಲೆ ತನ್ನ ಅಧಿಕಾರವಿರುವುದೆಂದು, ಹಿಂದೂಮತವು ತನ್ನದೆಂದು ನಿರೂಪಿಸಿಕೊಳ್ಳುವುದೇ ಹೊರತು ಏನು ಇಲ್ಲ. ಇಲ್ಲಿ ಚಿಕ್ಕ ಉದಾಹರಣೆಯನ್ನು ಹೇಳಿಕೊಳ್ಳೋಣ. ಅದರಿಂದ ವಿಷಯವು ಸುಲಭವಾಗಿ ಅರ್ಥವಾಗಬಲ್ಲದು.

ಪೂರ್ವವು ಕಲಿಯುಗ ಪ್ರಾರಂಭದಲ್ಲಿ ಭಾರತ ದೇಶದಲ್ಲಿ ಕಾಡು ಪ್ರದೇಶ ಹೆಚ್ಚಾಗಿ ಇರುತ್ತಿತ್ತು. ಕಾಡುಗಳಲ್ಲಿ ಪ್ರಾಣಿಗಳು ಕೂಡ ಹೆಚ್ಚಾಗಿ ಇರುತ್ತಿದ್ದವು. ಪ್ರಸ್ತುತ ಕಾಲದಲ್ಲಿ ಕಾಡುಗಳು ಕಾಣಿಸದೇ ಹೋದರೂ, ಪೂರ್ವದಲ್ಲಿ ಮಾತ್ರ ಪ್ರತಿ ನೂರು ಕಿಲೋಮೀಟರುಗಳಿಗೆ ಕನಿಷ್ಟ ಐದಾರು ಚದರ ಕಿಲೋಮೀಟರುಗಳ ವಿಸ್ತಾರವಿರುವ ಕಾಡು ಇರುತ್ತಿತ್ತು. ಜನಸಂಖ್ಯೆ ಕಡಿಮೆಯಿದ್ದ ಆ ಕಾಲದಲ್ಲಿ

ಪ್ರಜೆಗಳಿಂದ ಕಾಡಿಗೆ ಯಾವ ಅಪಾಯವಿಲ್ಲದೇ ಇರುತ್ತಿತ್ತು. ಈಗಿನ ಕಾಲದಲ್ಲಿ ಜನಸಂಖ್ಯೆ ಬೆಳೆದುಹೋಗಿ, ಕಾಡುಗಳು ಕಡಿಮೆಯಾಗಿ, ಕಾಡುಗಳಲ್ಲಿನ ಪ್ರಾಣಿಗಳು ಕೂಡ ಇಲ್ಲದೆ ಹೋಗಿವೆ. ಪೂರ್ವವು ಭಾರತ ದೇಶದಲ್ಲಿನ ಬಹಳ ಕಾಡುಗಳಲ್ಲಿ ಸಿಂಹಗಳು ಸಹಿತ ಇರುತ್ತಿದ್ದವು. ಮಧ್ಯಪ್ರದೇಶದಲ್ಲಿ ಇಂದಿಗೂ ಭಾರತದೇಶ ದಲ್ಲಿಯೇ ಅತಿದೊಡ್ಡ ಕಾಡು ಇದೆ. ದಕ್ಷಿಣ ಭಾರತ ದೇಶದಲ್ಲಿ ಇಂದಿಗೂ ಪೂರ್ವ ಪರ್ವತಗಳು, ಪಶ್ಚಿಮ ಪರ್ವತಗಳ ಹೆಸರಿನಿಂದ ಕಾಡುಗಳು ಎಷ್ಟೋ ನೂರು ಕಿಲೋಮೀಟರುಗಳು ವಿಸ್ತಾರಗೊಂಡಿವೆ. ಇಂದಿಗೂ ಕಾಡುಗಳಲ್ಲಿ ಕೆಲವು ಪ್ರಾಣಿಗಳು, ಪಕ್ಷಿಗಳಿದ್ದರೂ ಪೂರ್ವದಲ್ಲಿ ಇದ್ದಹಾಗೆ ಎಲ್ಲ ಜಾತಿಗಳು ಇಲ್ಲ.

ಪಕ್ಷಿಗಳಲ್ಲಿ ಕೆಲವು ಶಾಖಾಹಾರಿಗಳಿರುವಾಗ, ಕೆಲವು ಮಾಂಸಹಾರಿಗಳು ಶಾಖಾಹಾರಿಗಳು ಕೂಡ ಇವೆ. ಪ್ರಾಣಿಗಳಲ್ಲಿ ಕೆಲವು ಮಾಂಸಹಾರಿಗಳಾಗಿ ಇರುವಾಗ, ಕೆಲವು ಶಾಖಾಹಾರಿಗಳಾಗಿ ಕೂಡ ಇವೆ. ಪಕ್ಷಿಗಳಲ್ಲಿ ರಾಮಗಿಣಿ ಶಾಖಾಹಾರಿ ಆಗಿರುವಾಗ, ಕಾಗೆ ಮಾಂಸಾಹಾರಿ ಮತ್ತು ಶಾಖಾಹಾರಿಯಾಗಿ ಇದೆ. ಹಾಗೆಯೇ ಪ್ರಾಣಿಗಳಲ್ಲಿ ಸಿಂಹವು ಮಾಂಸಾಹಾರಿ ಆಗಿರುವಾಗ, ಚಿಂಪಾಂಜಿ ಕೋತಿಗಳು ಶಾಖಾಹಾರಿ ಮತ್ತು ಮಾಂಸಹಾರಿಯಾಗಿ ಇವೆ. ಪಕ್ಷಿಗಳಲ್ಲಿ ಗಿಣಿಗಳು, ಮತ್ತು ಕಾಗೆಗಳು ಬುದ್ಧಿವಂತಿಕೆ ಇರುವವಾಗಿವೆ. ಕೆಲವು ವಿಷಯಗಳಲ್ಲಿ ಮನುಷ್ಯನಿಗಿಂತ ಹೆಚ್ಚು ತಿಳುವಳಿಕೆಯಿಂದ ಇವೆಯೆಂದು ಹೇಳಬಹುದು. ಹಾಗೆಯೇ ಪ್ರಾಣಿಗಳಲ್ಲಿ ಸಿಂಹಗಳು, ಚಿಂಪಾಂಜಿ ಕೋತಿಗಳು ಎರಡೂ ತಿಳುವಳಿಕೆ ಇರುವವೆಂದು ಹೇಳಬಹುದು. ಕೆಲವು ವಿಷಯಗಳಲ್ಲಿ ಮನುಷ್ಯನಿಗಿಂತಲೂ ಚುರುಕಾಗಿ ಪ್ರವರ್ತಿಸುತ್ತವೆ. ಅವುಗಳ ಜೀವನ ವಿಧಾನದಲ್ಲಿ ಅವು ಮನುಷ್ಯನಿಗಿಂತಲೂ ಹೆಚ್ಚು ತಿಳುವಳಿಕೆ ಇರುವವೆಂದೇ ಹೇಳಬಹುದು. ಆದರೆ ಈ ದಿನ ಮನುಷ್ಯ ಎಲ್ಲ ಜೀವರಾಶಿಗಳಿಗಿಂತಲೂ ಬುದ್ಧಿಶಕ್ತಿ ಯಿರುವವ ನೆಂದು ಎಲ್ಲರೂ ಅನ್ನುತ್ತಿದ್ದಾರೆ. ವಾಸ್ತವವಾಗಿ ಮನುಷ್ಯ ಪಕ್ಷಿಗಳಲ್ಲಿನ ಕಾಗೆ ಗಿಣಿಗಳಿಂತಲೂ, ಪ್ರಾಣಿಗಳಲ್ಲಿನ ಸಿಂಹ ಚಿಂಪಾಂಜಿಗಿಂತಲೂ ಹೆಚ್ಚು

ಬುದ್ಧಿಯಿರುವವನಲ್ಲವೆಂದು ಹೇಳಬಹುದು. ಮನುಷ್ಯ ತಾನು ಬದುಕುವುದಕ್ಕೆ ಪ್ರಾಯಕ್ಕೆ ಬರುವವರೆಗು ತರಬೇತಿ ಹೊಂದುತ್ತಿರುವನು. ಪ್ರಾಣಿಗಳು ತರಭೇತಿ ಇಲ್ಲದೇನೇ ತಮ್ಮ ಹಿರಿಯರನ್ನು ನೋಡಿ ಕಲಿತುಕೊಂಡು ಯುಕ್ತಿಯಿಂದ ಬದುಕುತ್ತಿವೆ.

ಈ ದಿನ ಮನುಷ್ಯ ಬುದ್ಧಿವಂತನೆಂದು ಹೆಸರುಹೊಂದಿದ್ದರೂ ಅದು ವಾಸ್ತವವಲ್ಲ. ಸಿಂಹಗಳು ಮಾತನಾಡಿಕೊಳ್ಳದೇ, ಸನ್ನೆ ಮಾಡಿಕೊಳ್ಳದೇ ಆಹಾರವನ್ನು ಜಾಣತನದಿಂದ ಪಥಕದ ಪ್ರಕಾರ ಬೇಟೆಯಾಡಬಲ್ಲವು. ಆ ಬುದ್ಧಿಚತುರತೆ ಮನುಷ್ಯರಲ್ಲಿ ಇಲ್ಲವೆಂದೇ ಹೇಳಬಹುದು. ಒಂದು ಪಥಕವನ್ನು ತಯಾರುಮಾಡಿ ಕೊಟ್ಟರೂ ಅದನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಲಾಗದ ದಡ್ಡತನದಿಂದ  ಮಾನವನಿದ್ದಾನೆ. ಹಾಗೆಯೇ ಪಕ್ಷಿಗಳ ವಿಷಯಕ್ಕೆ ಬಂದರೆ ಗಿಣಿಗೂ, ಕಾಗೆಗೂ ಇರುವ ಬುದ್ಧಿಸೂಕ್ಷ್ಮತೆ ಕೂಡ ಮನುಷ್ಯನಿಗೆ ಇಲ್ಲವೆಂದು ಹೇಳಬಹುದು.  ಕಾಗೆ ಗಿಣಿಗಿಂತಲೂ,  ಹಾಗೆಯೇ ಸಿಂಹ ಚಿಂಪಾಂಜಿಗಿಂತಲೂ ಮನುಷ್ಯ ದಡ್ಡನಾದರು, ಮನುಷ್ಯ ಈದಿನ ಎಲ್ಲ ಜೀವಿಗಳಿಗಿಂತಲೂ ಬುದ್ಧಿವಂತನಾದವನು ಎಂದು ಯಾಕೆ ಹೇಳಲ್ಪಟ್ಟಿದ್ದಾನೆಂದು ಪ್ರಶ್ನೆ ಬರಬಹುದು. ಅದಕ್ಕೆ ನಮ್ಮ ಉತ್ತರ ಈ ರೀತಿ ಇದೆ. ಪ್ರಾಣಿಗಳ ಹತ್ತಿರ, ಪಕ್ಷಿಗಳ ಹತ್ತಿರ ಇಲ್ಲದಿರುವುದು ಮನುಷ್ಯನ ಹತ್ತಿರ ಒಂದು ಇದೆ. ಅದರಿಂದ ಮನುಷ್ಯ ತಾನು ಬುದ್ಧಿವಂತನೆಂದು ಹೇಳಿಕೊಳ್ಳುತ್ತಿದ್ದಾನೆ. ವಾಸ್ತವವಾಗಿ ಅದು ಬುದ್ಧಿಯಲ್ಲ. ಇತರ ಜೀವರಾಶಿಗಳ ಹತ್ತಿರವಿಲ್ಲದಿರುವುದು, ಮನುಷ್ಯರ ಹತ್ತಿರ ಇರುವುದು ಒಂದೇ ಒಂದು "ಮೋಸ".  ಜೀವರಾಶಿಗಳ ಹತ್ತಿರ ಇರುವುದು 'ಇತರರನ್ನು ನಂಬುವುದು' ಇದೆ.  ಅದೇ ಮಾನವನ ಹತ್ತಿರ 'ಮೋಸವು' ಇದೆ. ಮನುಷ್ಯರಲ್ಲು ಕೂಡ ಇತರರನ್ನು ನಂಬುವ ಮನುಷ್ಯರಿದ್ದಾರೆ. ಅಂಥವರನ್ನು ಬುದ್ಧಿ ಇಲ್ಲದವರಂತೆ ಲೆಕ್ಕಿಸಿ ಅವರನ್ನು ಮೋಸ ಮಾಡುವವರಿದ್ದಾರೆ. ನಂಬಿಕೆ ಒಂದು ವಿಧಾನವಾದರೆ, ಅದಕ್ಕೆ ವಿರುದ್ಧವಾಗಿರುವುದು ಮೋಸ. ಮನುಷ್ಯನನ್ನು ನಂಬಿರುವ ಜೀವರಾಶಿಗಳನ್ನು ಮನುಷ್ಯ ಮೋಸ ಮಾಡುತ್ತಿರುವನು. ಮನುಷ್ಯ

ತನ್ನ ಬುದ್ಧಿವಂತಿಕೆಯಿಂದ ಪ್ರಾಣಿಗಳನ್ನು ಪಕ್ಷಿಗಳನ್ನು ಗೆಲ್ಲುತ್ತಿಲ್ಲ. ತನ್ನಲ್ಲಿರುವಂತಹ ಮೋಸದಿಂದ ಅವುಗಳನ್ನು ಗೆಲ್ಲುತ್ತಿದ್ದಾನೆ. ಇಂದಿನ ಕಾಲದಲ್ಲಿ ಮೋಸ ಮಾಡುವವನನ್ನು ಬುದ್ಧಿವಂತನೆಂದು ಹೇಳುತ್ತಿದ್ದಾರೆ ಹೊರತು ಬುದ್ಧಿವಂತನನ್ನು ಯಾರು ಬುದ್ಧಿವಂತನೆಂದು ಹೇಳುತ್ತಿಲ್ಲ. ವಾಸ್ತವಕ್ಕೆ ಮೋಸಗಾರರು ದಡ್ಡರೇ. ಬುದ್ಧಿವಂತನು ತಾನು ಇತರರನ್ನಾಗಲಿ, ಇತರ ಪ್ರಾಣಿಗಳನ್ನಾಗಲಿ ಇತರ ಪಕ್ಷಿಗಳನ್ನಾಗಲಿ ಮೋಸ ಮಾಡುವುದಿಲ್ಲ.

ಬುದ್ಧಿಬಲವಾದ ಬುದ್ಧಿವಂತಿಕೆ ಬೇರೆ, ಇತರರನ್ನು ಮೋಸ ಮಾಡುವ ಕೆಲಸಗಳು ಬೇರೆ. ಒಬ್ಬ ವಿಜ್ಞಾನಿಯನ್ನು ಒಬ್ಬ ಸಾಧಾರಣ ಮನುಷ್ಯನನ್ನು ಒಂದುಕಡೆ ನಿಲ್ಲಿಸಿ ನೋಡಿದರೆ, ಎಷ್ಟೋ ವಿದ್ಯಾಭ್ಯಾಸವನ್ನು ಮಾಡಿ ಎಷ್ಟೋ ವಿಷಯಗಳನ್ನು ಪರಿಶೋಧಿಸಿದ ವಿಜ್ಞಾನಿಯನ್ನು ಬುದ್ಧಿವಂತನೆಂದು ಹೇಳಬಹುದು. ಸಾಧಾರಣ ಮನುಷ್ಯ, ಓದು ಬರಹವಿಲ್ಲದ ಅವನನ್ನು ವಿಜ್ಞಾನಿಗಿಂತಲೂ ಬುದ್ಧಿವಂತನೆಂದು ಹೇಳಲಾರೆವು. ಆಗ ಸಾಧಾರಣ ಮನುಷ್ಯನನ್ನು ದಡ್ಡನೆಂದು, ವಿಜ್ಞಾನಿಯನ್ನು ಬುದ್ಧಿವಂತನೆಂದು ಯಾರಾದರೂ ಹೇಳಬಹುದು. ವಿಜ್ಞಾನಿ ಬುದ್ಧಿವಂತನಾಗಿದ್ದರೂ ಸಾಧಾರಣ ಮನುಷ್ಯನನ್ನು ಮೋಸ ಮಾಡುವ ಅವಶ್ಯಕತೆ ಇಲ್ಲ. ಆದರೆ ಸಾಧಾರಣ ಮನುಷ್ಯ ತನ್ನ ಅವಶ್ಯಕತೆಯ ಸಲುವಾಗಿ ಇತರರನ್ನು ಮೋಸಮಾಡುವ ಅವಕಾಶ ಇದೆ. ಮೋಸ ಮಾಡುವುದಕ್ಕೆ ಎದುರಿಗಿರುವವನು ಬುದ್ಧಿವಂತನಾ ಅಲ್ಲವಾ ಎಂದು ನೋಡಬೇಕಾದ ಕೆಲಸವಿಲ್ಲ. ಬುದ್ಧಿವಂತನಾಗಲಿ, ದಡ್ಡನಾಗಲಿ ಯಾರಾದರಾಗ ಬಹುದು. ತನ್ನ ಮಾತುಗಳನ್ನು ನಂಬುವವನನ್ನು ಸುಲಭವಾಗಿ ಮೋಸ ಮಾಡಬಹುದೆಂದು ಎನ್ನುವುದೇ ಇಲ್ಲಿರುವಂತ ಸೂತ್ರ, ಎದುರಿ ಗಿರುವವನು ಬುದ್ಧಿವಂತನಾ ಅಲ್ಲವಾ ಎನ್ನುವುದು ಸೂತ್ರವಲ್ಲ. ಉದಾಹರಣೆಗೆ ಬುದ್ಧಿವಂತ ನಾದ ವಿಜ್ಞಾನಿಯನ್ನು ದಡ್ಡನಾದ ಸಾಧಾರಣ ಮನುಷ್ಯ ಹೇಗೆ ಮೋಸ ಮಾಡಿದ್ದಾನೋ ಇಲ್ಲಿ ಗಮನಿಸುವುದಾದರೆ, ಬುದ್ಧಿ ಮುಖ್ಯವಲ್ಲ ಎಂದು, ಮೋಸಹೋಗುವುದಕ್ಕೆ ನಂಬಿಕೆಯೇ ಮುಖ್ಯವೆಂದು ತಿಳಿದುಹೋಗುತ್ತಿದೆ.

ಕೋಪ ಎಂದರೆ ಏನೋ ಎಲ್ಲರಿಗೂ ತಿಳಿದಿದೆ, ಆದರೆ ಕೋಪಕ್ಕೆ ವಿರುದ್ಧವಾಗಿರುವುದು ಯಾವುದೆಂದರೆ 'ಕೋಪವಿಲ್ಲದಿರುವುದು' ಎಂದು ಬಹಳ ಜನ ಹೇಳುತ್ತಿದ್ದಾರೆ. ಹಾಗೆಯೇ ಕಾಮ ಎಂದರೆ ಸಹ ಎಲ್ಲರಿಗೂ ತಿಳಿದಿದೆ, ಆದರೆ ಕಾಮಕ್ಕೆ ವಿರುದ್ಧಪದವನ್ನು ಕುರಿತು ಕೇಳಿದರೆ 'ನಿಷ್ಕಾಮವು' ಎಂದು ಹೇಳುತ್ತಿದ್ದಾರೆ. ಕೋಪಕ್ಕು, ಕಾಮಕ್ಕು ವಿರುದ್ಧ ಪದವನ್ನು ವಾಸ್ತವವಾಗಿ ಯಾರೂ ಹೇಳದೇ ಅದನ್ನು ಇಲ್ಲದಿರುವುದನ್ನು ನಿಷ್ಕಾಮವೆಂದು, ನಿಷ್ಕೋಪವೆಂದು ಹೇಳುತ್ತಿದ್ದಾರೆ. ಅದು ಸರಿಯಾದ ಉತ್ತರವಲ್ಲ. ದೆವ್ವವೆಂದು ಹೇಳಿ ಅದಕ್ಕೆ ವಿರುದ್ಧಪದ ಹೇಳೆಂದರೆ ದೆವ್ವಕ್ಕೆ ವಿರುದ್ಧಪದ ದೇವರು ಎಂದು ಪ್ರತ್ಯೇಕವಾಗಿ ಹೇಳಬೇಕೆ ಹೊರತು, ದೆವ್ವವಿಲ್ಲ ಎಂದು ಹೇಳುವುದು ಉತ್ತರವಲ್ಲ. ಕಪ್ಪು ಎಂದಾಗ ಅದಕ್ಕೆ ವಿರುದ್ಧವಾಗಿ ಬಿಳುಪು ಎಂದು ಪ್ರತ್ಯೇಕವಾದ ಮತ್ತೊಂದು ಬಣ್ಣವನ್ನು ಹೇಳುತ್ತಿದ್ದೇವೆ ಅಲ್ಲವೇ! ಹಾಗೆಯೇ ಪ್ರತಿ ಒಂದಕ್ಕು ವಿರುದ್ಧವಾಗಿರುವುದು ಪ್ರತ್ಯೇಕವಾಗಿ ಇರುತ್ತದೆ. ಆ ಪದ್ಧತಿ ಪ್ರಕಾರ ಕಾಮ ಎಂದರೆ ಆಸೆ ಎಂದು ಅರ್ಥ, ಅದಕ್ಕೆ ವಿರುದ್ಧವಾಗಿರುವುದು ದಾನ ಎಂದು ಹೇಳಬೇಕಾಗಿದೆ. ಅಲ್ಲಿ ನಿಷ್ಕಾಮವೆಂದು ಹೇಳಬಾರದು. ಹಾಗೆಯೇ ಕ್ರೋಧವೆಂದರೆ ಕೋಪ ಎಂದು ಅರ್ಥ, ಅದಕ್ಕೆ ವಿರುದ್ಧವಾದ ಪದವನ್ನು ಹೇಳಬೇಕಾಗಿ ಬಂದಾಗ ಕೋಪಕ್ಕೆ ಪೂರ್ತಿ ವಿರುದ್ಧವಾಗಿರುವ ದಯೆಯನ್ನು ಕುರಿತು ಹೇಳಬೇಕು, ಹಾಗೆಯೇ ಇಲ್ಲಿ ನಂಬಿಕೆ ಎನ್ನುವ ಪದಕ್ಕೆ ಪೂರ್ತಿ ವಿರುದ್ಧ ಪದವಾಗಿ ಮೋಸವೆಂದು ಹೇಳಬೇಕೆ ಹೊರತು, ಅಪನಂಬಿಕೆ ಎಂದು ಹೇಳಬಾರದು.

ಕೋಪವಿರುವವನನ್ನು ಕೋಪಿಷ್ಠಿ ಎನ್ನುತ್ತೇವೆ. ಹಾಗೆಯೇ ಮೋಸ ಮಾಡುವವನನ್ನು ಮೋಸಗಾರ ಎನ್ನುತ್ತೇವೆ. ಕೋಪಕ್ಕೆ ವಿರುದ್ಧವಾದ ದಯೆ ಇರುವವನನ್ನು ದಯಾಮಯನು ಎಂದು ಹೇಳುತ್ತೇವೆ. ಹಾಗೆಯೇ ಮೋಸಕ್ಕೆ ವಿರುದ್ಧವಾದ ನಂಬಿಕೆ ಇರುವವನನ್ನು ನಂಬಿಕಸ್ತನು ಎಂದು ಹೇಳುತ್ತೇವೆ ಅಥವಾ ವಿಶ್ವಾಸಿ ಎಂದು ಕೂಡ ಹೇಳುತ್ತೇವೆ. ಮೋಸಗಾರ ಇತರರ ವಿಶ್ವಾಸ

(ನಂಬಿಕೆ) ವನ್ನು ಆಧಾರಮಾಡಿಕೊಂಡು ಇತರರನ್ನು ಮೋಸ ಮಾಡುತ್ತಿರುತ್ತಾನೆ. ಅಂಥವನು ಯಾರನ್ನು ವಿಶ್ವಾಸಿಸುವುದಿಲ್ಲ. ವಿಶ್ವಾಸಿಸಿದಹಾಗೆ ನಟಿಸಬಹುದು ಆದರೆ, ಅವನ ಹತ್ತಿರ ಮೋಸವೇ ಹೊರತು ವಿಶ್ವಾಸ ಇರುವುದಿಲ್ಲ. ಹಾಗೆಯೇ ವಿಶ್ವಾಸಿಯಾದವನು ಇತರರನ್ನು ವಿಶ್ವಾಶಿಸಿ ತಾನು ಮೋಸ ಹೋಗಬಲ್ಲನು ಆದರೆ, ಆತನ ಹತ್ತಿರ ವಿಶ್ವಾಸ ಹೊರತು ಮೋಸವಿರುವುದಿಲ್ಲ. ಈಗ ವಾಸ್ತವ ವಿಷಯಕ್ಕೆ ಬರೋಣ. ಒಬ್ಬ ವಿಜ್ಞಾನಿ, ಒಬ್ಬ ಸಾಧಾರಣ ಮನುಷ್ಯ ಇಬ್ಬರೂ ಒಂದು ಪ್ರಯಾಣದಲ್ಲಿ ಒಬ್ಬರಿಗೊಬ್ಬರು ಪರಿಚಯವಾದರು. ಒಂದು ತೀರ್ಥಯಾತ್ರೆಗೆ ಹೋಗುವ ಸಮಯದಲ್ಲಿ ಅವರು ಒಬ್ಬರಿಗೊಬ್ಬರು ಭೇಟಿಯಾಗುವುದು ನಡೆದಿದೆ. ಇಬ್ಬರೂ ಸೇರಬೇಕಾದ ಗಮ್ಯಕ್ಕೆ ಸೇರಿದ ನಂತರ ಮಧ್ಯಾಹ್ನ ಹೋಟಲಿಗೆ ಹೋಗಿ ಭೋಜನ ಮಾಡಿಕೊಂಡು ಬರಬೇಕಾಗಿತ್ತು. ಆಗ ಸಾಧಾರಣ ಮನುಷ್ಯ ವಿಜ್ಞಾನಿಯೊಂದಿಗೆ ಹೀಗೆ ಅಂದನು. "ನಾನು ಇಲ್ಲಿಗೆ ಇದಕ್ಕುಮೊದಲು ಬಹಳಬಾರಿ ಬಂದಿದ್ದೇನೆ. ಇಲ್ಲಿ ಒಂದು ಹೋಟಲಿನಲ್ಲಿ ಊಟ ಬಹಳ ಚೆನ್ನಾಗಿರುತ್ತದೆ. ಆದರೆ ಊಟದ ಧರ ಸ್ವಲ್ಪ ಹೆಚ್ಚಾಗಿಯೇ ಇರುತ್ತದೆ. ಕೊನೆಯಲ್ಲಿ ಐಸ್‌ಕ್ರೀಮ್ ಕೂಡ ಕೊಡುತ್ತಾರೆ. ಎಲ್ಲಾ ಸೇರಿಸಿ 300/–ರೂ. ಇರುತ್ತದೆ. ಆದರೆ 30/– ರೂಪಾಯಿಂದಲೇ 300/– ರೂಪಾಯಿಯ ಊಟ ತಿನ್ನುವ ಅವಕಾಶ ಕೂಡ ಆ ಹೋಟಲಿನವರು ಕಲ್ಪಿಸಿದ್ದಾರೆ. 15000 ರೂಪಾಯಿಗಳನ್ನು ಒಂದೇಬಾರಿ ಹಣಪಾವತಿ ಮಾಡಿ ಊಟದ ಟಿಕೆಟ್ ತೆಗೆದುಕೊಂಡವರಿಗೆ ಊಟ ತಿಂದ ನಂತರ ನಮಗೆಕೊಟ್ಟ ಹರಿದ ಟಿಕೆಟನ್ನು ಕೌಂಟರ್‌ನಲ್ಲಿ ತೋರಿಸಿದರೆ ಕೇವಲ 30 ರೂಪಾಯಿಗಳನ್ನು ಇಟ್ಟುಕೊಂಡು ಉಳಿದ ಹಣವನ್ನು ವಾಪಸ್ ಕೊಡುತ್ತಾರೆ. ನಾನು ಯಾವಾಗ ಬಂದರೂ ನಿಯಮದ ಪ್ರಕಾರ 15000/–ರೂ. ಹಣವನ್ನು ಕಟ್ಟಿ 300 ರೂಪಾಯಿಯ ಊಟವನ್ನು 30 ರೂಪಾಯಿಗಳಿಗೇ ತಿನ್ನುವುದು ನಡೆಯುತ್ತಿದೆ." ಎಂದು ಹೇಳಿದನು.

ಆತನ ಮಾತುಗಳನ್ನು ಕೇಳಿದ ವಿಜ್ಞಾನಿ ಅವನು ಹೇಳಿರುವುದು ನಿಜವೆಂದು ನಂಬಿ "ಇದರಿಂದ ಅವರಿಗೆ ನಷ್ಟವಲ್ಲವೇ! ಲಾಭವೇನು ಬರುತ್ತದೆ?" ಎಂದು ಕೇಳಿದನು. ಅದಕ್ಕೆ ಆತನು "ಅದರಿಂದ ಅವರ ವ್ಯಾಪಾರ ಬೆಳೆಸುವುದೇ ಧ್ಯೇಯವಾಗಿರುತ್ತದೆ. ಬಂದ ಎಲ್ಲರಬಳಿ 15000/–ರೂ. ಹಣ ಇರುವುದಿಲ್ಲ ಅಲ್ಲವೇ! ಇದೆಲ್ಲಾ ವ್ಯಾಪಾರದಲ್ಲಿ ಟ್ರಿಕ್ಸುಗಳು" ಎಂದು ಹೇಳುವುದು ನಡೆದಿದೆ. ಆತನು ಹೇಳಿರುವುದೆಲ್ಲಾ ಕೇಳಿ ಎಲ್ಲಾ ನಿಜವೇಯೆಂದು ವಿಜ್ಞಾನಿ ನಂಬಿದ್ದಾನೆ. ನಂತರ ಹೋಟಲಿಗೆ ಹೋದಾಗ ಇಬ್ಬರೂ ಒಂದೇ ಟೇಬಲ್‌ನಲ್ಲಿ ಕುಳಿತು ಅಲ್ಲಿಯವರೆಗು ಹೇಳಿದ ಸಾಧಾರಣ ವ್ಯಕ್ತಿ ತನ್ನಬಳಿಯಿದ್ದ 15000 ರೂ. ಹಣ ತೆಗೆದು ಕೈಯಲ್ಲಿ ಇಟ್ಟುಕೊಂಡು ಊಟದ ಟಿಕೆಟ್ ತರುತ್ತೇನೆಂದು ಎದ್ದು "ನಿನಗು ಕೂಡ ಊಟದ ಟಿಕೆಟ್ ಬೇಕಲ್ಲವೇ! ನಿನಗು ಸಹ ಟಿಕೆಟ್ ತರುತ್ತೇನೆ" ಎಂದನು. ಆಗ ವಿಜ್ಞಾನಿಯು 15000ರೂ. ಹಣವನ್ನು ಕೊಟ್ಟು ತನಗು ಸಹ ಊಟದ ಟಿಕೆಟ್ ತೆಗೆದುಕೊಂಡು ಬರಲು ಹೇಳಿದನು. ಸಾಧಾರಣ ವ್ಯಕ್ತಿ ಕೌಂಟರ್ ಹತ್ತಿರಕ್ಕೆ ಹೋಗಿ 600ರೂ. ಹಣ ಮಾತ್ರ ಕೊಟ್ಟು ಎರಡು ಟಿಕೆಟ್ಟುಗಳನ್ನು ತಂದನು. ಇಬ್ಬರೂ ಕುಳಿತು ಊಟ ಮಾಡಿದರು. ವಿಜ್ಞಾನಿಗಿಂತಲೂ ಮೊದಲು ಊಟ ಮಾಡಿದ ಸಾಧಾರಣ ವ್ಯಕ್ತಿ ಮುಂಚೆ ಎದ್ದು ಕೈ ತೊಳೆದುಕೊಳ್ಳಲು ಹೋಗಿ ಪುನಃ ಬರಲಿಲ್ಲ. ನಂತರ ವಿಜ್ಞಾನಿ ಕೂಡ ಊಟ ಮಾಡಿ ಕೈ ತೊಳೆದುಕೊಂಡು ಬಂದರೂ ಮುಂಚೆ ಹೋದವನು ಬರಲಿಲ್ಲ. ಆಗ ವಿಜ್ಞಾನಿಗೆ ಅನುಮಾನ ಬಂದು ಹೋಟಲ್ ಕೌಂಟರ್ ಹತ್ತಿರಕ್ಕೆ ಹೋಗಿ ಕೇಳಿದನು. ಆಗ ತಾನು ಮೋಸ ಹೋಗಿರುವೆನೆಂದು ಅರ್ಥವಾಯಿತು. ಈ ವಿಧವಾಗಿ ಬುದ್ಧಿವಂತನನ್ನು ದಡ್ಡನು ಸಹಿತ ಮೋಸ ಮಾಡಬಲ್ಲನೆಂದು ತಿಳಿಯುತ್ತಿದೆ. ಇದು ಕಲ್ಪಿತ ವಿಷಯವಲ್ಲ, ವಾಸ್ತವವಾಗಿ ತಮಿಳುನಾಡಿನಲ್ಲಿ ಮದ್ರಾಸು ಪಟ್ಟಣದಲ್ಲಿ ನಡೆದ ಸಂಘಟನೆಯನ್ನೇ ಹೇಳಿದ್ದೇವೆ.

ಮನುಷ್ಯರಲ್ಲಿ ಮೋಸ ಎನ್ನುವುದು ಸ್ವಲ್ಪ, ನಂಬಿಕೆ ಎನ್ನುವುದು ಸ್ವಲ್ಪ ಇರುತ್ತದೆ. ಆದರೇ ಎಲ್ಲರೂ ಒಂದೇ ರೀತಿ ಇರುವುದಿಲ್ಲ. ಕೆಲವರು ಹೆಚ್ಚು

ನಂಬಿಕೆಯುಳ್ಳವರು ಇರುವಾಗ, ಕೆಲವರು ಹೆಚ್ಚು ಮೋಸ ಮಾಡುವವರು ಇರುವುದು ಸಹಜವೇ ಎಂದು ಹೇಳಬಹುದು. ಮೋಸ ಯಾವಾಗಲೋ ಒಂದು ಬಾರಿ ಹೊರ ಬೀಳುತ್ತದೆ. ಆಗ ಮೋಸಗಾರನ ಮರ್ಯಾದೆ ಹೋಗುತ್ತದೆ. ಆದರೂ ಅವನ ಕೆಲಸವನ್ನು ಅವನು ಮಾಡುತ್ತಲೇ ಇರುತ್ತಾನೆ. ನಂಬಿಕೆಗೆ ಮೋಸಕ್ಕೆ ಭೇದ ತಿಳಿದಾಗ ಇದು ಒಳ್ಳೆಯದು, ಇದು ಕೆಟ್ಟದ್ದು ಎಂದು ಹೇಳಬಹುದು. ಆದರೆ ಕೆಲವುಕಡೆ ಇದು ಮೋಸದ ಕೆಲಸವೆಂದು ತಿಳಿಯದೇ ಹೋಗಿರುವುದರಿಂದ, ಕೆಲವರು ತಾವು ಮೋಸಮಾಡುತ್ತಿದ್ದರೂ, ತಮ್ಮ ಕೆಲಸವೇ ಒಳ್ಳೆಯ ಕೆಲಸವೆಂದು ತಿಳಿದಿರುವುದರಿಂದ ಮೋಸ ಮಾಡುವವರ ದೊಡ್ಡಸ್ತಿಕೆಯೇ ಚಲಾವಣೆ ಆಗುತ್ತಿರುವುದು. ಮೋಸ ಮಾಡುವವರು ಬಹಳಜನ ಇರುವಾಗ ಮೋಸಹೋಗುವವರು ಮೋಸ ಮಾಡುವವರಿಂದ ಮೋಸ ಹೋಗುತ್ತಾ, ಅದು ಮೋಸವೆಂದು ತಿಳಿಯದೆ ಮೋಸ ಮಾಡುವವರನ್ನೇ ಸಮರ್ಥಿಸುವಾಗ, ಎಲ್ಲೋ ಒಬ್ಬರು ಅಥವಾ ಇಬ್ಬರು ಇದು ಮೋಸವೆಂದು ಹೇಳುತ್ತಾ, ಮೋಸಗಾರನ ಮೋಸವನ್ನು ಹೊರಗಿಟ್ಟರೂ ಅದರಿಂದ ಏನು ಪ್ರಯೋಜನ ವಿರುವುದಿಲ್ಲ. ಮೇಲಾಗಿ ಸತ್ಯವನ್ನು ಹೇಳಿದವನನ್ನೇ ತಪ್ಪೆಂದು ಎಲ್ಲರೂ ಬಾಯಿಮುಚ್ಚಿಸುವರು. ಕೆಲವು ವಿಷಯಗಳಲ್ಲಿ ಮೋಸವೇ ಪೂರ್ತಿ ಚಲಾವಣೆ ಆಗುತ್ತಿದೆ. ಆದರೂ ಅದನ್ನು ಮೋಸವೆಂದು ಯಾರು ಅನ್ನುವುದಿಲ್ಲ. ಇದನ್ನನುಸರಿಸಿ ಕೆಲವು ವಿಷಯಗಳಲ್ಲಿ ಮಾತ್ರ ಮನುಷ್ಯ ಮೋಸವನ್ನು ಗುರುತಿಸಬಲ್ಲನು ಆದರೆ, ಮತ್ತೆ ಕೆಲವು ವಿಷಯಗಳಲ್ಲಿ ಮೋಸವನ್ನು ಪೂರ್ತಿಯಾಗಿ ಗುರುತಿಸಲಾರನೆಂದು ತಿಳಿಯಿತು. ಪ್ರಪಂಚ ವಿಷಯಗಳಲ್ಲಿ ಮೋಸವನ್ನು ಗುರುತಿಸಬಹುದು ಆದರೆ, ಪರಮಾತ್ಮ ವಿಷಯಗಳಲ್ಲಿ ಮೋಸವನ್ನು ಗುರುತಿಸುವುದು ದುರ್ಲಭವಾಗಿದೆ. ಕೆಲವು ಪ್ರಪಂಚ ವಿಷಯಗಳಲ್ಲಿ ಕೂಡ ಮೋಸವೆನ್ನುವುದು ಗುರುತಿಸಲ್ಪಡುತ್ತಿಲ್ಲ. ಕೆಲವು ಪ್ರಪಂಚ ವಿಷಯಗಳಲ್ಲಿ ಪೂರ್ತಿಯಾಗಿ ಮೋಸಹೋದ ನಂತರ ಸ್ವಲ್ಪ ಕಾಲಕ್ಕೂ ಸಹ ಇದು ಮೋಸವೆಂದು ಗುರುತಿಸಲಾಗದೆ ಹೋಗುತ್ತಿದ್ದಾರೆ. ದೇವರ ವಿಷಯದೊಳಗೆ ಬಂದರೆ ಬಹಳಜನ ತಾವು ಮೋಸಹೋಗುತ್ತಿದ್ದೇವೆಂದು ತಿಳಿಯದೆ

ಮೋಸಹೋಗುತ್ತಿದ್ದಾರೆ. ಎಷ್ಟು ಬುದ್ಧಿವಂತವರಾದರೂ ದೇವರ ವಿಷಯದಲ್ಲಿ ಪೂರ್ತಿಯಾಗಿ ಮೋಸಹೋಗುತ್ತಿದ್ದಾರೆ. ತಾವು ಎಷ್ಟು ಕಾಲ ಮೋಸಹೋದರೂ, ತಾವು ಮೋಸಹೋಗಿದ್ದೇವೆಂದು ತಿಳಿಯದಂತಿದ್ದಾರೆ.

ದೇವರ ವಿಷಯದಲ್ಲಿ ಮೋಸ ಮಾಡುವವರು ತಮ್ಮದು ಮೋಸವಲ್ಲ ವೆಂದು, ತಮ್ಮದು ಕೆಟ್ಟ ಕೆಲಸವಲ್ಲವೆಂದು ಒಳ್ಳೆಯ ಕೆಲಸವೇ ಎಂದು ವಾದಿಸುತ್ತಿದ್ದಾರೆ. ತಮ್ಮನ್ನು ದೊಡ್ಡದಾಗಿ ಪ್ರಕಟಿಸಿಕೊಳ್ಳುತ್ತಿದ್ದಾರೆ. ಈ ವಿಷಯವನ್ನು ಒಂದು ಉದಾಹರಣೆಯ ಮೂಲಕ ವಿವರಿಸಿಕೊಳ್ಳೋಣ. ಪೂರ್ವವು ಅರಣ್ಯಗಳಲ್ಲಿ ಸಿಂಹವಿರುತ್ತಿತ್ತು ಎಂದು ಮೊದಲೇ ಹೇಳಿಕೊಂಡಿದ್ದೇವೆ ಅಲ್ಲವೇ! ಸಿಂಹವೆಂದರೆ ಕ್ರೂರಮೃಗವೆಂದು ಬಹಳ ಜನರಿಗೆ ತಿಳಿದಿದೆ. ದೊಡ್ಡ ಪ್ರಾಣಿಗಳನ್ನು ಸಹಿತ ಸಾಯಿಸುವ ಸಿಂಹವು ಮನುಷ್ಯನನ್ನು ಬಿಡದೆ ಸಾಯಿಸುವುದು. ಆದರೆ ಮನುಷ್ಯನಿಗಿಂತಲೂ ಬುದ್ಧಿ ಇರುವವು ಸಿಂಹಗಳೆಂದು ಹೇಳಿಕೊಂಡಿದ್ದೇವೆ. ಹಸಿವಾದಾಗ ಮಾತ್ರ ಪ್ರಾಣಿಗಳನ್ನು ಬೇಟೆಯಾಡುವ ಸಿಂಹವು ಹಸಿವಿಲ್ಲದಿರುವಾಗ ತನ್ನ ಮುಂದೆಯೇ ಆಹಾರ ಪ್ರಾಣಿ ಇದ್ದರೂ ಅದನ್ನು ಏನು ಮಾಡದೆ ಸುಮ್ಮನಿರುತ್ತದೆ. ಕ್ರೂರಮೃಗವಾಗಿ ಹೇಳಿಕೊಳ್ಳುವ ಸಿಂಹವು ಹಸಿವಿನಿಂದ ಇಲ್ಲದಿರುವಾಗ ಯಾವ ಪ್ರಾಣಿಯು ತನ್ನ ಮುಂದೆ ಇದ್ದರೂ ಬೇಟೆಯಾಡದು. ಸಿಂಹವು ಬುದ್ಧಿಯಿರುವ ಪ್ರಾಣಿ ಆದಕಾರಣ ಭವಿಷ್ಯತ್ತನ್ನು ಊಹಿಸಿ ತನ್ನ ಸಂತತಿಯನ್ನು ಪ್ರೀತಿಯಿಂದ ಬೆಳೆಸಬಲ್ಲದು. ಇತರ ಸಿಂಹಗಳ ಸಂತತಿ ತನ್ನ ಸಂತತಿಯೊಂದಿಗೆ ಪೈಪೋಟಿಗೆ ಬಾರದಂತೆ ಚಿಕ್ಕ ಮರಿಗಳನ್ನು ಸಹಿತ ಕೊಂದುಹಾಕುವುದು. ತನ್ನ ಮರಿಗಳಾವುವು? ಇತರ ಮರಿಗಳಾವುವು? ಎಂದು ವಿವೇಕ ಹೊಂದಿರುತ್ತದೆ. ತನ್ನ ಸಂತಾನ ವಿಷಯದಲ್ಲಿ ಸ್ತ್ರೀ ಸಿವಂಗಿಗಳು ಇಲ್ಲದ ವಿವೇಕ ಜ್ಞಾನವು ಗಂಡು ಸಿಂಹಗಳಿಗೆ ಇರುತ್ತದೆ. ಸಿಂಹ ಜಾತಿಯಲ್ಲಿ ಗಂಡು ಜಾತಿಯನ್ನು ಸಿಂಹಗಳೆಂದು, ಸ್ತ್ರೀ ಜಾತಿಯನ್ನು ಸಿವಂಗಿಗಳೆಂದು ಕರೆಯುತ್ತೇವೆ.

ಪೂರ್ವದಲ್ಲಿ ಸಾವಿರ ವರ್ಷಗಳ ಹಿಂದೆ ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನನ್ನು ಮೋಸದಿಂದ ಗುಲಾಮನನ್ನಾಗಿ ತಯಾರಿ ಮಾಡಿಕೊಂಡು ಬದುಕುತ್ತಿದ್ದನು. ಬಿಳಿಯ ಜಾತಿ ಪ್ರಜೆಗಳು ಕಪ್ಪು ಜಾತಿಯ ಪ್ರಜೆಗಳನ್ನು ಗುಲಾಮರನ್ನಾಗಿ ಮಾಡಿಕೊಂಡು, ಪ್ರಾಣಿಗಳಿಂದ ಮಾಡಿಸಿದಂತೆ ಗುಲಾಮರಿಂದ ಕೆಲಸವನ್ನು ಮಾಡಿಸಿಕೊಳ್ಳುತ್ತಿದ್ದರು. ಕೆಲವು ದೇಶಗಳಲ್ಲಿ ಕಪ್ಪು ಜಾತಿಯ ಜನರನ್ನೇ ಅಲ್ಲದೇ, ಬಡವರನ್ನು ಗುಲಾಮರನ್ನಾಗಿ ಮಾಡಿಕೊಂಡು ಅವರ ಮೇಲೆ ದೊಡ್ಡಸ್ತಿಕೆ ಚಲಾಯಿಸುತ್ತಿದ್ದರು. ಆ ದಿನ ಗುಲಾಮರಾಗಿರುವವರಲ್ಲಿ ಸಹ ಎಷ್ಟೋ ಬುದ್ಧಿವಂತರಿದ್ದರೂ, ಅವರು ತಮ್ಮ ಯಜಮಾನರ ಕೈಯಲ್ಲಿ ಗುಲಾಮರ ಬದುಕು ಬದುಕುತ್ತಿದ್ದರು. ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನನ್ನು ಮೋಸದಿಂದ ಗುಲಾಮರನ್ನಾಗಿ ಮಾಡಿಕೊಂಡು ಅಧಿಕಾರ ಚಲಾಯಿಸುತ್ತಿದ್ದನು. ಅಷ್ಟೇ ಹೊರತು ಆ ದಿನದ ಯಜಮಾನರು ಬುದ್ಧಿವಂತರು, ಗುಲಾಮರು ದಡ್ಡರೇನೂ ಅಲ್ಲ. ಆ ದಿನಗಳಲ್ಲಿ ಒಬ್ಬ ಯಜಮಾನ ತನ್ನ ಗುಲಾಮನನ್ನು ಎಷ್ಟು ಹಿಂಸಿಸಿ ಕೆಲಸ ಮಾಡಿಸಿದರೂ ಕೆಲಸ ಮಾಡುವುದೇ ಗುಲಾಮರ ಸರದಿಯಾಗಿ ಇರುತ್ತಿತ್ತು. ಯಾರಾದರು ಗುಲಾಮ ತನ್ನ ಯಜಮಾನನನ್ನು ಎದುರಿಸಿ ಮಾತನಾಡಿದರೆ ಅನೇಕವಾಗಿ ಹಿಂಸಿಸುತ್ತಿದ್ದರು. ಗುಲಾಮರನ್ನು ಸಂತೆಯಲ್ಲಿ ಪ್ರಾಣಿಗಳಂತೆ ಇತರರಿಗೆ ಮಾರುತ್ತಿದ್ದರು, ಹಾಗೆಯೇ ಕೊಳ್ಳುತ್ತಿದ್ದರು. ಈ ದಿನ ಪ್ರಾಣಿಗಳ ಸಂತೆಗಳು ನಡೆದಂತೆ ಆ ದಿನಗಳಲ್ಲಿ ಗುಲಾಮರನ್ನು ಮಾರುವ ಮತ್ತು ಕೊಳ್ಳುವ ಸಂತೆಗಳು ನಡೆಯುತ್ತಿದ್ದವು. ಅಂತಹ ಅನಾಗರಿಕ ಕಾಲದಲ್ಲಿ ಒಬ್ಬ ಗುಲಾಮ ತನ್ನ ಯಜಮಾನನು ಮಾಡಿಸುವ ಕೆಲಸಗಳನ್ನು ಮಾಡಲಾರದೆ, ಕೊಡುವ ಹಿಂಸೆಗಳನ್ನು ಅನುಭವಿಸಲಾಗದೆ ಎಲ್ಲಾದರು ಕಾಡಿನೊಳಗೆ ಓಡಿಹೋಗಿ ಕ್ರೂರಪ್ರಾಣಿಗಳಿಗೆ ಆಹಾರವಾಗಿ ಮರಣಿಸುವುದು ಒಳ್ಳೆಯದೆಂದು ಆಲೋಚಿಸಿ ತನ್ನ ಯಜಮಾನನ ಬಳಿಯಿಂದ ಒಂದು ದಿನ ರಾತ್ರಿ ಓಡಿಹೋಗುವುದು ನಡೆದಿದೆ.

ಯಜಮಾನರನ್ನು ಬಿಟ್ಟು ಓಡಿಹೋದ ಗುಲಾಮರನ್ನು ಹಿಡಿದುಕೊಂಡು ಬಂದು ನಂತರ ಅವರಿಗೆ ಆ ಕಾಲದಲ್ಲಿ ಮರಣ ಶಿಕ್ಷೆಯನ್ನು ಹಾಕುತ್ತಿದ್ದರು.

ಓಡಿಹೋದರೆ ಮರಣ ಶಿಕ್ಷೆ ಇರುವುದರಿಂದ ಯಾರು ಓಡಿಹೋಗುವ ಪ್ರಯತ್ನ ಮಾಡದೆ ಎಷ್ಟು ಕಷ್ಟವಾದರೂ ಹಾಗೆಯೇ ಮಾಡುತ್ತಿದ್ದರು. ಈಗ ಯಜಮಾನನ ಬಳಿಯಿಂದ ಓಡಿಹೋದ ಗುಲಾಮ ತಾನು ಕ್ರೂರ ಮೃಗಕ್ಕೆ ಆಹಾರವಾಗಿ ಸತ್ತುಹೋಗಬೇಕೆಂದುಕೊಂಡನು ಆದ್ದರಿಂದ ಮರಣಶಿಕ್ಷೆಗೆ ಭಯಪಡದೆ ಓಡಿಹೋದನು. ಸತ್ತುಹೋಗಬೇಕೆಂದು ಹೋಗಿರುವ ಗುಲಾಮ ಕಾಡಿನೊಳಗೆ ಹೋದ ನಂತರ ಸಿಂಹವು ವಾಸಿಸುವ ಗುಹೆಯನ್ನು ನೋಡಿ ಅದರೊಳಗೆ ಧೈರ್ಯವಾಗಿ ಹೋದನು. ಗುಹೆಯಲ್ಲಿ ಸಿಂಹಕ್ಕೆ ಆಹಾರವಾಗಬೇಕೆಂಬ ನಿರ್ಣಯದೊಂದಿಗೆ ಗುಹೆಯೊಳಗೆ ಹೋದನು. ಗುಹೆಯೊಳಗಿನಿಂದ ಸಿಂಹದ ಗರ್ಜನೆಯ ಶಬ್ಧವನ್ನು ಕೇಳಿ ಸಿಂಹವು ಗುಹೆಯಲ್ಲಿ ಇದೆಯೆಂದು ನಿರ್ಧಾರಿಸಿಕೊಂಡು ಗುಲಾಮ ಗುಹೆಯೊಳಗೆ ಹೋದನು. ಆ ಸಮಯದಲ್ಲಿ ಸಿಂಹವು ಗುಹೆಯೊಳಗೇ ಇದ್ದರೂ ಅದರ ಕಾಲಿಗೆ ಬಲವಾದ ಮುಳ್ಳು ಚುಚ್ಚಿಕೊಂಡಿರುವ ಕಾರಣ ಅದು ನಡೆಯಲಾಗದ ಸ್ಥಿತಿಯಲ್ಲಿದೆ. ಆ ದಿನವೇ ಕಾಲಿನಲ್ಲಿ ಮುಳ್ಳು ಚುಚ್ಚಿದೆ, ಆದ್ದರಿಂದ ಸಿಂಹವು ಹೆಚ್ಚು ನೋವಿನಿಂದ ದುಃಖ ಪಡುತ್ತಿತ್ತು. ಆ ದುಃಖದಲ್ಲಿ ಅದು ಮನುಷ್ಯನನ್ನು ನೋಡಿದರೂ ಮೌನವಾಗಿ ಇತ್ತು. ಆಗ ಅದರ ಪರಿಸ್ಥಿತಿಯನ್ನು ನೋಡಿದ ಗುಲಾಮ ಅದಕ್ಕೆ ಕಾಲಿನಲ್ಲಿ ಮುಳ್ಳು ಇರುವುದರಿಂದ ತನ್ನನ್ನು ಏನೂ ಅನ್ನಲಿಲ್ಲವೆಂದೂ, ಕಾಲಿನಲ್ಲಿರುವ ಮುಳ್ಳನ್ನು ತೆಗೆದುಹಾಕಿದರೆ ಆಗ ಕಾಲನ್ನು ಕದಲಿಸಿ ನನ್ನ ಮೇಲೆ ಬರಬಲ್ಲದೆಂದು ಯೋಚಿಸಿ ಸಿಂಹದ ಮುಂದೆ ಹೋಗಿ ಅದರ ಕಾಲನ್ನು ಹಿಡಿದುಕೊಂಡು ಬಲವಾಗಿರುವ ಮುಳ್ಳನ್ನು ಕಷ್ಟಾಪಟ್ಟು ತೆಗೆದನು. ಮುಳ್ಳನ್ನು ತೆಗೆದ ನಂತರ ಕೂಡ ಸಿಂಹವು ತನ್ನನ್ನು ಏನು ಮಾಡದಿರುವ ಕಾರಣ ಅದರ ಕಾಲಿಗೆ ಮುಳ್ಳು ತೆಗೆದರೂ ನೋವು ಹೋಗಲಿಲ್ಲವೆಂದು ಗ್ರಹಿಸಿ, ನೋವು ಕಡಿಮೆಯಾದರೆ ಎದ್ದು ನಿಂತು ತನ್ನನ್ನು ಸಾಯಿಸಬಲ್ಲದೆಂದುಕೊಂಡ ಗುಲಾಮ, ಕೂಡಲೇ ಗುಹೆಯ ಹೊರಗಡೆ ಹೋಗಿ ನೋವು ಕಡಿಮೆ ಮಾಡುವ ಔಷಧ ಗಿಡಗಳನ್ನು ತಂದು ಅದರ ಎಲೆಗಳನ್ನು ಹಿಸುಕಿ ಮುಳ್ಳು ತೆಗೆದ ಗಾಯಕ್ಕೆ ರಸರನ್ನು ಹಿಂಡಿ

ನಂತರ ತನ್ನಬಳಿಯಿದ್ದ ಪಂಚೆಯನ್ನು ಸ್ವಲ್ಪ ಹರಿದು ಅದರ ಕಾಲಿಗೆ ಎಲೆಯನ್ನಿಟ್ಟು ಕಟ್ಟನ್ನು ಕಟ್ಟಿದನು. ಆಗ ಔಷಧ ಪ್ರಭಾವಕ್ಕೆ ಸಿಂಹದ ಕಾಲಿನಲ್ಲಿರುವ ನೋವು ಪೂರ್ತಿಯಾಗಿ ಕಾಣಿಸಿಕೊಳ್ಳದೆ ಹೋಯಿತು. ಮರು ದಿನವೇ ಸಿಂಹವು ಎದ್ದು ನಿಲ್ಲಲ್ಲು ಸಾಧ್ಯವಾಯಿತು. ಆದರೂ ಸಿಂಹವು ಮನುಷ್ಯನನ್ನು ಏನು ಮಾಡಲಿಲ್ಲ.

ಸಿಂಹ ನಿಂತರೂ ಅದು ನಡೆಯಲಾರದ ಸ್ಥಿತಿಯಲ್ಲಿರುವುದೆಂದು ಗಮನಿಸಿದ ಗುಲಾಮು ಅದಕ್ಕೆ ನಡೆಯುಲು ಸಾಧ್ಯವಾದರೆ ತನ್ನನ್ನು ಸಾಯಿಸಬಲ್ಲದೆಂದು ತಿಳಿದು, ಸಿಂಹವು ನಡೆಯುವುದಕ್ಕೆ ಶಕ್ತಿಯನ್ನು ಬರುವಹಾಗೆ ಸ್ವಲ್ಪ ಆಹಾರವನ್ನು ಸಿಂಹಕ್ಕೆ ಇಡಬೇಕೆಂದುಕೊಂಡು ಗುಹೆಯ ಹೊರಗೆ ಹೋಗಿ ಕಷ್ಟಪಟ್ಟು ಒಂದು ಮೊಲವನ್ನು ಹಿಡಿದು ತಂದು ಸಿಂಹದ ಮುಂದಿಟ್ಟನು. ಆಗ ಸಿಂಹವು ಮೊಲವನ್ನು ತಿಂದು ಸ್ವಲ್ಪ ಹಸಿವನ್ನು ಕಡಿಮೆ ಮಾಡಿಕೊಂಡಿತು. ಆದರೆ ಮನುಷ್ಯನಿಗೆ ಸಿಂಹವು ಕ್ರೂರಮೃಗವೆಂದು ತಿಳಿದಿದ್ದರೂ, ಅದು ಬಹಳ ಬುದ್ಧಿಯಿಂದಿರುವ ಪ್ರಾಣಿಯೆಂದು ಮಾತ್ರ ತಿಳಿದಿಲ್ಲ. ಸಿಂಹವು ತನ್ನನ್ನು ಕಷ್ಟದಲ್ಲಿ ಆದರಿಸಿ ಕಾಲಿಗೆ ಮುಳ್ಳು ತೆಗೆದುಹಾಕಿ, ಗಾಯಕ್ಕೆ ಔಷಧವನ್ನು ಹಚ್ಚಿ, ನಂತರ ಆಹಾರವನ್ನು ಸಹ ನೀಡಿದ ಮನುಷ್ಯನಿಗೆ ಯಾವ ಹಾನಿಯುನ್ನು ಮಾಡಬೇಕೆಂದುಕೊಳ್ಳಲಿಲ್ಲ. ಮೇಲಾಗಿ ಅದು ಗುಲಾಮನಿಗೆ ಹತ್ತಿರವಾಗಿದ್ದೂ ಆತನೊಂದಿಗೆ ಸ್ನೇಹ ಮಾಡತೊಡಗಿತು. ಒಂದು ತಿಂಗಳ ಕಾಲ ಹಾಗೆಯೇ ಸಾಗಿಹೋಯಿತು. ಒಂದೇ ಗುಹೆಯಲ್ಲಿ ವಾಸಿಸುವಂತಹ ಮನುಷ್ಯ ಹಾಗೂ ಸಿಂಹವೂ ಗುಹೆ ಹೊರಗೆ ಹೋಗಿ ಆಹಾರವನ್ನು ಸಂಪಾದಿಸಿಕೊಂಡು ತಿಂದು ಪುನಃ ಗುಹೆಯೊಳಗೆ ಬಂದು ಇರುತ್ತಿದ್ದರು. ಆದರೆ ಆದಿನಗಳಲ್ಲಿ ಗುಲಾಮರು ಓಡಿಹೋದರೆ ಅವರನ್ನು ತಪ್ಪದೇ ಹುಡುಕಿ ಹಿಡಿದುಕೊಂಡು ಎಲ್ಲರೂ ನೋಡುವಂತೆ ಬಹಿರಂಗ ಪ್ರದೇಶದಲ್ಲಿ ಮರಣ ಶಿಕ್ಷೆಯನ್ನು ಹಾಕುತ್ತಿದ್ದರು. ಹಾಗೆ ಮಾಡಿದರೆ ಇತರ ಗುಲಾಮರು ಅದನ್ನು ನೋಡಿ ತಾವು ಓಡಿಹೋಗದೆ ಭಯಪಟ್ಟು ಇರಬಲ್ಲರೆಂದು ಹಾಗೆ ಮಾಡುತ್ತಿದ್ದರು.

ಓಡಿಹೋದ ಗುಲಾಮನನ್ನು ಹುಡುಕುವ ಗುಂಪು ಕಾಡನ್ನು ಸಹ ಬಿಡದೆ ಹುಡುಕುವುದರಿಂದ, ಆಹಾರಕ್ಕಾಗಿ ಗುಹೆ ಹೊರಗೆ ಹೋದ ಗುಲಾಮ ಅವರ ಕೈಗೆ ಸಿಕ್ಕಿಬಿದ್ದನು. ಆಗ ಗುಲಾಮನನ್ನು ಆ ರಾಜ್ಯದ ರಾಜನ ಮುಂದೆ ಹಾಜರು ಪಡಿಸಿದಾಗ ಅಲ್ಲಿನ ರಾಜ ಗುಲಾಮನನ್ನು ಮೂಟೆಕಟ್ಟಿ ಸಿಂಹಕ್ಕೆ ಆಹಾರವಾಗಿ ಹಾಕಿರಿ ಎಂದು ಶಿಕ್ಷೆ ವಿಧಿಸಿದನು. ಬಹಿರಂಗವಾಗಿ ನಡೆಯುವ ಆ ಶಿಕ್ಷೆಯನ್ನು ಒಂದು ಮೈದಾನದಲ್ಲಿ ಒಂದು ತಂತಿಯಬೇಲಿಯನ್ನು ಏರ್ಪಾಟು ಮಾಡಿ ಅದರಲ್ಲಿ ನಡೆಯುವುದು ಎಲ್ಲರೂ ನೋಡುವಂತೆ ಮಾಡಬೇಕೆಂದು ಅವರು ಅದೇ ವಿಧವಾಗಿ ಕಬ್ಬಿಣತಂತಿಯೊಂದಿಗೆ ಐದು ಎಕರೆಗಳ ವಿಸ್ತೀರ್ಣವಿರುವ ಬೇಲಿಯನ್ನು ತಯಾರುಮಾಡಿ, ಒಂದು ದಿನ ಗುಲಾಮನನ್ನು ಮೂಟೆಯಲ್ಲಿಹಾಕಿ ಆತನು ಮೂಟೆಯಲ್ಲಿ ಕದಲುತ್ತಿರುವಾಗ, ಹಸಿವುಗೊಂಡ ಸಿಂಹವನ್ನು ಬೋನಿನಿಂದ ತಂದು ಬೇಲಿಯಲ್ಲಿ ಬಿಟ್ಟರು. ಆಗ ಹಸಿವಿನಿಂದಿದ್ದ ಸಿಂಹವು ಕದಲುತ್ತಿರುವ ಮೂಟೆಯ ಹತ್ತಿರಕ್ಕೆ ಬಂದು ಮೂಟೆಯನ್ನು ವಾಸನೆ ನೋಡಿ ತನ್ನ ಉಗುರುಗಳಿಂದ ಮೂಟೆಯನ್ನು ಹರಿದುಹಾಕಿತು. ಆದರೆ ಒಳಗಿರುವ ಮನುಷ್ಯನಿಗೆ ಸ್ವಲ್ಪವೂ ಉಗುರುಗಳ ಗಾಯಗಳಾಗದೇ ಮೂಟೆಯನ್ನು ಮಾತ್ರ ಹರಿದುಹಾಕಿ ಮನುಷ್ಯನನ್ನು ಹೊರಗೆ ಬರುವಹಾಗೆ ಮಾಡಿತು. ಹಸಿವಿನಿಂದಿರುವ ಸಿಂಹವು ಗುಲಾಮನ ಮೇಲೆ ದಾಳಿ ಮಾಡದೆ ಹೊರಗೆ ಬಂದ ಗುಲಮನೊಂದಿಗೆ ಸ್ನೇಹದಿಂದ ತನ್ನ ನಾಲಿಗೆಯಿಂದ ನಾಕುವುದನ್ನು ಪ್ರಾರಂಭಿಸಿತು. ಗುಲಾಮ ಕಾಡಿನೊಳಗೆ ಹೋದಾಗ ಗುಹೆಯಲ್ಲಿ ಕಾಣಿಸಿದ ಸಿಂಹವೇ ಬೋನಿನಲ್ಲಿ ಸಿಲುಕಿ ಅಲ್ಲಿಗೆ ಬಂದಿರುವುದರಿಂದ ಆ ಸಿಂಹವು ಮೂಟೆಯ ವಾಸನೆಯನ್ನು ನೋಡಿ ತನ್ನ ಘ್ರಾಣಶಕ್ತಿಯಿಂದ ಗುಲಾಮನನ್ನು ಗುರುತಿಸಿತು. ಕಾಡಿನಲ್ಲಿ ಕಷ್ಟದಲ್ಲಿ ತನಗೆ ಸಹಾಯಪಟ್ಟ ಮನುಷ್ಯನ ಮೇಲೆ ಹಸಿವಿನಲ್ಲು ಕೂಡಾ ತನ್ನ ಸ್ನೇಹವನ್ನೇ ವ್ಯಕ್ತಪಡಿಸಿತು.

ಆ ಸಂಘಟನೆಯಿಂದ ಸಿಂಹ ಕ್ರೂರ ಪ್ರಾಣಿಯಾದರೂ ಬುದ್ಧಿಯುಳ್ಳ ಪ್ರಾಣಿಯೆಂದು ತಿಳಿಯಿತು. ಅದೇ ವಿಧವಾಗಿ ನಿಜವು ತಿಳಿಯದ ಮನುಷ್ಯ

ತನಗೆ ತಿಳಿದಿರುವುದೇ ವಾಸ್ತವ ಎಂದುಕೊಳ್ಳದೇ, ತನಗೆ ತಿಳಿಯದ ಸತ್ಯಗಳು ಎಷ್ಟೋ ಇವೆಯೆಂದು ತಿಳಿಯಬೇಕಾಗಿದೆ. ಆದರೆ ದೇವರ ವಿಷಯದಲ್ಲಿ ನಿಜವನ್ನು ತಿಳಿಯದ ಮನುಷ್ಯನಿಗಿಂತಲೂ ಪ್ರಾಣಿಗಳು ಅಜ್ಞಾನಿಗಳೆಂದು ತಿಳಿದುಕೊಂಡಹಾಗೆ ತನಗೆ ತಿಳಿದಿರುವುದೇ ಸತ್ಯವೆಂದು ತಿಳಿದುಕೊಳ್ಳುವುದು ನಡೆಯುತ್ತಿದೆ. ಇಲ್ಲಿ ಮೇಲೆ ತಿಳಿಸಿರುವ ಘಟನೆಯಿಂದ ಮನುಷ್ಯರಿಗಿಂತ ಪ್ರಾಣಿಗಳೇ ಬುದ್ಧಿ ಯುಳ್ಳವೆಂದು ಅರ್ಥವಾದಹಾಗೆ, ಎಂದಾದರೂ ಮನುಷ್ಯನಿಗೆ ತಿಳಿದಿರುವುದು ಸತ್ಯವಲ್ಲವೆಂದು, ತಿಳಿಯದ ಸತ್ಯ ಎಷ್ಟೋ ಇರುವುದೆಂದು ತಿಳಿಯಬಲ್ಲದು. ಆದ್ದರಿಂದ ಹಿರಿಯರು ಒಂದುಮಾತನ್ನು ಈ ರೀತಿ ಹೇಳಿದ್ದಾರೆ. **"ನಿನಗೆ ಏನೂ ತಿಳಿಯದೆಂದು ನಿನಗೇ ತಿಳಿದಿಲ್ಲ. ಆದ್ದರಿಂದ ಎಲ್ಲಾ ತಿಳಿದಿದೆಯೆಂದು ಅಂದುಕೊಳ್ಳುತ್ತಿರುವೆ. ವಾಸ್ತವವಾಗಿ ನೀನು ಯಾರೋ ಕೂಡಾ ನಿನಗೆ ತಿಳಿದಿಲ್ಲ."** ಇದನ್ನನುಸರಿಸಿ ಮನುಷ್ಯ ಅಸತ್ಯವಾದುದನ್ನೇ ಸತ್ಯವೆಂದು ತಿಳಿದುಕೊಳ್ಳುತ್ತಿದ್ದಾ ನೆಂದು, ಸತ್ಯವಾದುದನ್ನು ಅಸತ್ಯವೆಂದು ತಿಳಿದುಕೊಳ್ಳುತ್ತಿದ್ದಾನೆಂದು ತಿಳಿಯಿತು. ಒಬ್ಬ ಮನುಷ್ಯ ಬಲವಂತನಾಗಿದ್ದಾಗ, ಆತನು ತಿಳಿದಿರುವುದೇ ಸತ್ಯವೆಂದು ನೆನೆದು, ತನ್ನ ಉದ್ದೇಶವನ್ನೇ ಇತರರ ಮೇಲೆ ತಿದ್ದುವನು. ಬಲವಂತನ ಉದ್ದೇಶ ತಪ್ಪು ಉದ್ದೇಶವೆಂದು, ಆತನು ತಿಳಿದಿರುವುದು ಸತ್ಯವಲ್ಲವೆಂದು ತಿಳಿದರೂ, ಬಲಹೀನನು ಬಲವಂತನೊಂದಿಗೆ ವಾದಿಸಲಾರನು. ಆದ್ದರಿಂದ ಬಲವಂತನ ಮಾತುಗಳೇ ಅಲ್ಲಿ ಜಾರಿಗೆ ನಡೆಯುತ್ತದೆ. ಆತನ ಮಾತುಗಳೇ ಎಲ್ಲರೂ ಕೇಳಬೇಕಾಗಿ ಬರುತ್ತದೆ.

ಈ ವಿಧವಾಗಿ ಬಲವಂತನ ಭಾವವನ್ನು ಬಲಹೀನರು ಇಷ್ಟವಿಲ್ಲದಿದ್ದರೂ ಕೇಳಬೇಕಾಗಿ ಬರುತ್ತಿದೆ. ಹಾಗಿರುವಾಗ ಬಲಹೀನನ ಸತ್ಯವಾದ ಭಾವವನ್ನು ಬಲವಂತನ ಅಸತ್ಯಭಾವವು ಆಕ್ರಮಿಸಿದೆಯೆಂದೇ ಹೇಳಬಹುದು. ಆದ್ದರಿಂದ ಬಲಹೀನನ ಭಾವವು ಅಡಗಿಕೊಂಡು ಬಲವಂತನ ಭಾವವೇ ಕಾಣಿಸುತ್ತಿದೆ. ಉದಾಹರಣೆಗೆ ಬಲಹೀನನ ಸ್ಥಳವನ್ನು ಬಲವಂತನು ಕಬ್ಜಾ ಮಾಡಿದಂತೆ, ಬಲಹೀನನ ಭಾವವನ್ನು ಬಲವಂತನು ಕಬ್ಜಾ ಮಾಡಿದ್ದಾನೆಂದು ಹೇಳಬಹುದು.

ಹೆಂಡತಿ ಬಲಹೀನಳಾಗಿ, ಗಂಡ ಬಲವಂತನಾಗಿರುವಾಗ ಹೆಂಡತಿ ಮಾತನ್ನು ಗಂಡ ಕೇಳುವುದಿಲ್ಲ. ಗಂಡನ ಮಾತನ್ನೇ ಹೆಂಡತಿ ಕೇಳಬೇಕಾಗಿ ಬರುತ್ತದೆ. ಅದರ ಪರ್ಯವಸಾನ ಸಂಸಾರವು ಕೆಟ್ಟುಹೋಗುತ್ತದೆಯೆಂದು, ತಾವು ಬಡವರಾಗಿ ಹೋಗುತ್ತೇವೆಂದು ತಿಳಿದರೂ, ಗಂಡನ ಕೈಯಲ್ಲಿ ಹೆಂಡತಿ ಕಬ್ಜಾ ಆಗಿರುವುದರಿಂದ ತಪ್ಪದೇ ಗಂಡ ಹೇಳಿದಹಾಗೆಯೇ ಹೆಂಡತಿ ಕೇಳಬೇಕಾಗಿ ಬರುತ್ತದೆ. ಜೂಜಾಟವಾಡಿದರೆ ಹಣ ಬರುವುದೆಂದು ಗಂಡ ಹೇಳಿದರೆ, ಬಲಹೀನಳಾದ ಹೆಂಡತಿ ಆತನನ್ನು ಎದುರಿಸಿ ಜೂಜಾಟವಾಡಿದರೇ ಹಣ ಹೋಗುವುದೆಂದು ಹೆಳುವುದಿಲ್ಲ. ಈ ವಿಧವಾಗಿ ಪ್ರಪಂಚ ವಿಷಯಗಳಲ್ಲಿ ಎಷ್ಟೋ ವಿಧವಾದ ಕಬ್ಜಾಗಳು ನಡೆಯುತ್ತವೆ.

ಒಬ್ಬ ತನ್ನ ಭೂಮಿಯಲ್ಲಿ ಅನುಕೂಲವಾಗಿ ಬೆಳೆಯುವ ಬೆಳೆಯನ್ನು ಹಾಕಿ ಬೆಳೆಸಿಕೊಳ್ಳುತ್ತಿರುವವನು ಇದ್ದಾನೆಂದುಕೊಳ್ಳೋಣ. ಅವನಿಗಿಂತಾ ಎಲ್ಲವಿಧಗಳಲ್ಲಿ ಬಲವಂತನು ಬಂದು ಅವನ ಭೂಮಿಯನ್ನು ಕಬ್ಜಾ ಮಾಡಿದ್ದಾನೆಂದುಕೊಳ್ಳೋಣ. ಆಗ ಅವನಿಗೆ ಇಷ್ಟಬಂದ ಬೆಳೆಯನ್ನು ಅವನು ಭೂಮಿಯಲ್ಲಿ ಹಾಕುವನು. ಆಗ ಮೊದಲನೆಯವನ ಹಿರೆತನ ಭೂಮಿಮೇಲೆ ಏನೂ ಇರುವುದಿಲ್ಲ. ಆಕ್ರಮದಾರನ ಇಷ್ಟದ ಪ್ರಕಾರ ಭೂಮಿಯಲ್ಲಿ ಬೆಳೆ ಹಾಕಲಾಗುವುದು ಆದರೆ ಭೂಮಿ ಇರುವವನ ಇಷ್ಟದ ಪ್ರಕಾರ ಆ ಭೂಮಿಯಲ್ಲಿ ಬೆಳೆ ಇರುವುದಿಲ್ಲ. ಇಲ್ಲಿ ಕಬ್ಜಾದಾರರು ಅಂದುಕೊಂಡಿರುವುದೇ ನಡೆಯುತ್ತದೆ. ಕಬ್ಜಾದಾರನ ನಿರ್ಣಯ ತಪ್ಪು ನಿರ್ಣಯವಾದರೂ ಅವನು ಬಲವಂತನಾಗಿದ್ದಾಗ ಉಳಿದವರೆಲ್ಲರೂ ಆ ತಪ್ಪು ನಿರ್ಣಯವನ್ನೇ ಸಮರ್ಥಿಸುತ್ತಿರುವರು. ಬಲಹೀನನ ಭೂಮಿಯನ್ನು ಬಲವಂತನು ಕಬ್ಜಾ ಮಾಡುತ್ತಿರುವುದು ಹೊರಗಿನ ಪ್ರಪಂಚದಲ್ಲಿ ನಡೆಯುತ್ತಿದೆ. ಒಬ್ಬ ಮನುಷ್ಯನ ಆಸ್ತಿಯನ್ನು ಕಬ್ಜಾ ಮಾಡಿದಂತೆ, ಇತರರ ಭಾವಗಳನ್ನು ಅಲ್ಲವೆಂದು ತಮ್ಮ ಭಾವಗಳನ್ನೇ ಇತರರ ಮೇಲೆ ಪ್ರಯೋಗಿಸಿ, ತಮ್ಮ ಮಾತಿನ ಪ್ರಕಾರ ತಮ್ಮ ಭಾವಗಳನ್ನೇ ದೊಡ್ಡವೆಂದು ಹೇಳಿಸುವವರೂ ಇದ್ದಾರೆ. ಇತರರ ಆಸ್ತಿಗಳನ್ನು, ಇತರರ ಉದ್ದೇಶಗಳನ್ನು ಭೂಮಿಯನ್ನು

ಕಬ್ಜಾಮಾಡುವವರು ಇದ್ದಂತೆ, ದೈವ ವಿಷಯಗಳನ್ನು ಸಹ ಕಬ್ಜಾಮಾಡಿಕೊಂಡು ದೈವ ವಿಷಯಗಳು ಹೀಗೇ ಇರಬೇಕೆಂದು ಆಜ್ಞಾಪಿಸುವವರು ಸಹ ಇದ್ದಾರೆ. ಈದಿನ ದೇವರ ಜ್ಞಾನವನ್ನೇ ಕಬ್ಜಾ ಮಾಡಿಕೊಳ್ಳುವವರು ಬಹಳಜನರಿದ್ದಾರೆ.

ದೇವರು ದೇವರಾಗಿ ಅಲ್ಲದೆ ಭಗವಂತನಾಗಿ ಭೂಮಿಮೇಲೆ ಬಂದು ತನ್ನ ಜ್ಞಾನ ಈ ವಿಧವಾಗಿ ಇರುವುದೆಂದು ಹೇಳಿಹೋದಾಗ, ಕೆಲವರು ಭಗವಂತನು ಹೇಳಿರುವ ಜ್ಞಾನವನ್ನು ಆಶ್ರಯಿಸಿ, ನಿಜವಾದ ದೈವಜ್ಞಾನವನ್ನು ತಾವು ತಿಳಿದು, ಇತರರಿಗೆ ಕೂಡ ತಿಳಿಸಿದಾಗ, ಜ್ಞಾನ ಭೋಧಿಸುವವರನ್ನು ಪ್ರಜೆಗಳು ಗೌರವ ಪೂರ್ವಕವಾಗಿ ನೋಡುವುದನ್ನು ಗಮನಿಸಿದ ಕೆಲವರು, ಆ ಗೌರವವು ತಮಗೇ ದಕ್ಕಬೇಕೆಂದು, ಇತರರ ದೃಷ್ಟಿಯಲ್ಲಿ ತಾವೇ ದೊಡ್ಡ ಜ್ಞಾನಿಗಳಾಗಿ ಕಾಣಿಸಬೇಕೆಂದು ಯೋಚಿಸಿ, ದೇವರು ಹೇಳಿದ ಜ್ಞಾನವನ್ನು ಕಬ್ಜಾ ಮಾಡಿಕೊಂಡು, ಅದೇ ಜ್ಞಾನಕ್ಕೆ ತಮ್ಮ ಮನೋಭಾವನೆಗಳನ್ನು ಸೇರಿಸಿ, ತಮಗೆ ಇಷ್ಟಬಂದ ಪದ್ಧತಿಯಲ್ಲಿ ಹೇಳಿ ಇದೇ ನಿಜವಾದ ಜ್ಞಾನವೆಂದು ಹೇಳುತ್ತಿರುವರು. ಹಾಗೆ ಹೇಳುವುದೇ ಅಲ್ಲದೆ ತಾವು ಹೇಳಿದ ಜ್ಞಾನವನ್ನು ಅಲ್ಲಗಳೆದವರೆಲ್ಲರನ್ನು ಅಜ್ಞಾನಿಗಳೆಂದು ಲೆಕ್ಕಿಸಿ ಪ್ರಚಾರ ಮಾಡುತ್ತಿದ್ದಾರೆ. ಅದರಿಂದ ನಿಜವಾದ ಜ್ಞಾನಿಗಳು ಪ್ರಜೆಗಳ ದೃಷ್ಟಿಯಲ್ಲಿ ಅಜ್ಞಾನಿಗಳಾಗಿ, ಜ್ಞಾನವನ್ನು ಕಬ್ಜಾಮಾಡಿ ಅಜ್ಞಾನವನ್ನು ಬೋಧಿಸುವವರು ನಿಜವಾದ ಜ್ಞಾನಿಗಳಾಗಿ ತಿಳಿಯಲ್ಪಡುತ್ತಿದ್ದಾರೆ. ಯಾರು ಏನು ಹೇಳುತ್ತಿದ್ದಾರೆಂಬ ವಿವೇಕವಿಲ್ಲದ ಮನುಷ್ಯರು, ಬಲವಂತರು ಮಾಡುವ ಕೆಟ್ಟ ಪ್ರಚಾರವನ್ನೇ ನಂಬಿ ಅಜ್ಞಾನವನ್ನೇ ಜ್ಞಾನವೆಂದುಕೊಳ್ಳುತ್ತಿದ್ದಾರೆ. ಹಾಗಿರುವಾಗ ನಿಜವಾದ ದೈವ ಜ್ಞಾನವನ್ನು ಬೋಧಿಸುವವರನ್ನು, ನಿಜವಾದ ಜ್ಞಾನಿಗಳನ್ನು, ಪ್ರಜೆಗಳು ನಂಬದೆ ಅವರು ಹೇಳುವುದು ಜ್ಞಾನವಲ್ಲವೆಂದು ತಿಳಿದು ಜ್ಞಾನಿಗಳನ್ನೇ ದೂಷಿಸುತ್ತಿದ್ದಾರೆ. ಬಲವಂತರು ಮಾಡುವ ಬೋಧನೆಗಳನ್ನು ಕೇಳಿದವರು ದೇವರು ಭಗವಂತನಾಗಿ ಬಂದು ಹೇಳಿದ ಮಾತುಗಳನ್ನು ಸಹ ಖಾತರುಮಾಡದೆ, ಇಂಪಾಗಿ ಹೇಳುವ ಬಲವಂತರ ಮತುಗಳನ್ನೇ ನಂಬುತ್ತಿದ್ದಾರೆ.

ಈದಿನ ದೇವರ ಧರ್ಮಗಳೆಲ್ಲ ಅಧರ್ಮಗಳಾಗಿ ಬದಲಾಗಿವೆ. ದೇವರ ಧರ್ಮಗಳನ್ನು ಕಬ್ಜಾ ಮಾಡಿದವರು ತಾವು ನಿಜವಾದ ಜ್ಞಾನಿಗಳೆಂದು ಪ್ರಕಟಿಸಿಕೊಂಡು ಜ್ಞಾನಿಗಳ ಸ್ಥಳವನ್ನು ಆಕ್ರಮಿಸಿಕೊಂಡಿದ್ದಾರೆ. ವೇಷದಲ್ಲಿ, ಭಾಷೆಯಲ್ಲಿ, ಆಚರಣೆಯಲ್ಲಿ ಎಲ್ಲಾ ವಿಧಗಳಲ್ಲಿ ನಿಜವಾದ ಜ್ಞಾನಿಗಳಂತೆ ಕಾಣಿಸುತ್ತ, ಜ್ಞಾನ ಕಬ್ಜಾದಾರರು ಜ್ಞಾನಕ್ಕೆ ತಾವೇ ದೊಡ್ಡವರೆಂದು ಹೇಳಿಕೊಳ್ಳುವುದರಿಂದ, ಈ ದಿನ ಪ್ರತಿ ಮತಗಳಲ್ಲೂ ನಮ್ಮ ಹಿರಿಯರು ಹೇಳಿರುವಹಾಗೆ ನಾವು ನಡೆದುಕೊಳ್ಳುತ್ತೇವೆಂದು ಪ್ರಜೆಗಳು ಹೇಳುತ್ತಿದ್ದಾರೆ ಹೊರತು, ದೇವರು ಹೇಳಿರುವ ಜ್ಞಾನದ ಪ್ರಕಾರ ನಡೆದುಕೊಳ್ಳುತ್ತೇವೆಂದು ಹೇಳುವವರು ಯಾರೂ ಇಲ್ಲ. ಈಗಿನ ಪರಿಸ್ಥಿತಿಯನ್ನು ಅನುಸರಿಸಿ ನೋಡಿದರೆ ಧರ್ಮಗಳು ಪೂರ್ತಿ ಅಧರ್ಮಗಳಾಗಿ ಬದಲಾಗಿಹೋಗಿವೆಯೆಂದು, ಧರ್ಮಗಳಿಗೆ ಗ್ಲಾನಿ ಏರ್ಪಟ್ಟಿರುವುದೆಂದು, ದೇವರ ಜ್ಞಾನಕ್ಕೆ ಮುಪ್ಪು ಏರ್ಪಟ್ಟಿದೆಯೆಂದು ಹೇಳಬಹುದು. ದೇವರ ಜ್ಞಾನವನ್ನು ಕಬ್ಜಾ ಮಾಡಿದವರು ಮಾತ್ರ ಇದಕ್ಕು ಮೊದಲಿಗಿಂತ ಈಗಲೇ ಜ್ಞಾನ ಚೆನ್ನಾಗಿದೆಯೆಂದು, ಎಲ್ಲರೂ ಸಕ್ರಮವಾಗಿ ತಾವು ಹೇಳಿದಂತೆ ನಡೆದುಕೊಳ್ಳುತ್ತಾರೆಂದು, ಆದ್ದರಿಂದ ಎಲ್ಲರೂ ದೇವರ ಮಾರ್ಗದಲ್ಲಿ ಸಕ್ರಮವಾಗಿದ್ದಾರೆಂದು ಹೇಳುತ್ತಿದ್ದಾರೆ. ವಾಸ್ತವವಾಗಿ ದೇವರ ದೃಷ್ಟಿಯಲ್ಲಿ ಧರ್ಮಗಳು ಅಧರ್ಮಗಳಾಗಿ ಬದಲಾಗಿಹೋಗಿವೆ.

ಜ್ಞಾನ ವಕ್ರ ಮಾರ್ಗವನ್ನು ಹಿಡಿದು, ಧರ್ಮಗಳು ಅಧರ್ಮಗಳಾಗಿ ಬದಲಾಗಿಹೋದಾಗ, ತಿರುಗಿ ಧರ್ಮಗಳನ್ನು ನೆಲೆಗೊಳಿಸುವುದಕ್ಕೆ ದೇವರು ಭಗವಂತನಾಗಿ ಭೂಮಿ ಮೇಲಕ್ಕೆ ಬಂದು, ತನ್ನ ಧರ್ಮಗಳನ್ನು ತಿಳಿಸಬೇಕಾದ ಅವಶ್ಯಕತೆ ಬಂದಿದೆಯೆಂದು ನಾವು ಹೇಳುತ್ತಿದ್ದೇವೆ. **ಕೆಲವು ಸೂಚನೆಗಳನ್ನು ಅನುಸರಿಸಿ ದೇವರು ಭಗವಂತನಾಗಿ ಈಗಾಗಲೇ ಭೂಮಿಮೇಲಕ್ಕೆ ಬಂದಿದ್ದಾನೆಂದು ಸ್ವಲ್ಪ ಅರ್ಥವಾಗುತ್ತಿದೆ**. ಭೂಮಿ ಮೇಲೆ ಯಾರು ಎಷ್ಟು ಅಜ್ಞಾನವನ್ನು ಬೋಧಿಸಿದರೂ, ಕೊನೆಗೆ ಅದು ದೇವರಿಂದ ಸರಿಹೊಂದಿ, ನಿಜವಾದ ಜ್ಞಾನ ಹೊರಬರುವುದೆಂದು ದೃಢವಾಗಿ ಹೇಳಬಹುದು. ಅಡಗಿಹೋಗಿರುವ

ಧರ್ಮಗಳನ್ನು ದೇವರು ನೆಲೆಗೊಳಿಸುವುದು ಸತ್ಯವೇ ಆದರೂ, ನಮ್ಮ ಸಮಕ್ಷಮದಲ್ಲಿ ಜ್ಞಾನ ಸ್ವಚ್ಛವಾಗಿ ಇದೆಯೆಂದು ಕಬ್ಜಾದಾರರು ಹೇಳುತ್ತಿದ್ದಾರೆ. ತಮಗೆ ಪ್ರಜೆಗಳಲ್ಲಿನ ಹಿಡಿತ, ಗೌರವವು ಎಲ್ಲಿ ಹೋಗುತ್ತದೋಯೆಂದು ಭಯಪಡುವ ಕಬ್ಜಾದಾರರು ದೇವರು ಬರುವುದಿಲ್ಲ, ಜ್ಞಾನವನ್ನು ಹೇಳುವುದಿಲ್ಲ, ನಾವು ಹೇಳುವುದೇ ನಿಜವಾದ ಜ್ಞಾನವೆಂದು ಪ್ರಜೆಗಳನ್ನು ನಂಬಿಸುತ್ತಿದ್ದಾರೆ. ಭೂಮಿಮೇಲೆ ಜ್ಞಾನಕ್ಕೆ ಮುಪ್ಪು ಏರ್ಪಟ್ಟಾಗ ತಪ್ಪದೇ ನಾನು ಬಂದು ನನ್ನ ಜ್ಞಾನವನ್ನು ನಾನೇ ಹೇಳುತ್ತೇನೆಂದು ಇದಕ್ಕು ಮೊದಲು ದೈವಗ್ರಂಥದಲ್ಲಿ ದೇವರು ಹೇಳಿದ್ದರೂ, ಕಬ್ಜಾದಾರರು ಆ ಮಾತನ್ನು ಪೂರ್ತಿ ಖಂಡಿಸುತ್ತಿದ್ದಾರೆ. ದೇವರು ಬರುವುದಿಲ್ಲವೆಂದು ಪ್ರಚಾರ ಮಾಡುತ್ತಿದ್ದಾರೆ.

ದೇವರಜ್ಞಾನವು ದೇವರಿಗೆ ಹೊರತು ಯಾವ ಮಾನವನಿಗೂ ತಿಳಿಯದೆಂದು, ಆದ್ದರಿಂದ ತನ್ನ ಜ್ಞಾನವನ್ನು ತಾನೇ ಹೇಳಬೇಕೆಂದು, ದೇವರು ಒಂದುಕಡೆ ವಾಕ್ಯದ ರೂಪದಲ್ಲಿ ಹೇಳಿದ್ದರೂ, ಆ ಮಾತನ್ನು ವಕ್ರಮಾರ್ಗ ಹಿಡಿಸಿ ದೇವರು ಬರುವುದಿಲ್ಲವೆಂದು ತಮ್ಮ ಉದ್ದೇಶವನ್ನೇ ತಾವು ಹೇಳುತ್ತಿರುವರು. ದೈವಗ್ರಂಥಗಳಲ್ಲಿ 'ನಾನು ಬರುತ್ತೇನೆ' ಎಂದು ಪ್ರತ್ಯಕ್ಷವಾಗಿ ಒತ್ತಿ ಒಕ್ಕಾಣಿಸಿದ ದೇವರ ಮಾತನ್ನು ತೆಗೆದುಹಾಕುತ್ತಿದ್ದಾರೆ. ಅಂತಿಮ ದೈವ ಗ್ರಂಥದಲ್ಲಿ ದೇವರ ಜ್ಞಾನವು ದೇವರಿಗೆ ಹೊರತು ಯಾವ ಮಾನವನಿಗೂ ತಿಳಿಯದೆಂದು ಹೇಳಿದ ವಾಕ್ಯವು ಸುರಾ 3 ಅಲೀ ಇಮ್ರಾನ್‌ನಲ್ಲಿ 7ನೇ ಆಯತ್‌ನಲ್ಲಿ ಇದ್ದರೂ ಆ ಮಾತನ್ನು ಮನುಷ್ಯ ಖಾತ್ರಿ ಮಾಡಲಿಲ್ಲ. ಮನುಷ್ಯರಲ್ಲಿ ಒಬ್ಬ ಮನುಷ್ಯನಾದವನು ನನಗೆ ದೇವರ ಜ್ಞಾನವು ತಿಳಿದಿಲ್ಲವೆಂದು ಒಪ್ಪಿಕೊಳ್ಳುತ್ತಿಲ್ಲ. ಯಾವ ಮನುಷ್ಯನಿಗೆ ತಿಳಿಯದೆಂಬ ವಾಕ್ಯವು ದೈವ ಗ್ರಂಥದಲ್ಲಿ ಇದ್ದರೂ ಎಲ್ಲಾ ತನಗೆ ತಿಳಿದಹಾಗೆಯೇ ಮಾತನಾಡುತ್ತಿದ್ದಾನೆ. ಮನುಷ್ಯ ದೇವರ ಜ್ಞಾನದ ಪ್ರಕಾರ ಹೀಗೆ ಇರಬೇಕೆಂದು ಹೇಳುತ್ತಿದ್ದಾನೆ. ಇದೇ ಸರಿಯಾದ ಜ್ಞಾನವೆಂದು ತಾನೇ ಸ್ವತಃವಾಗಿ ಹೇಳುತ್ತಿದ್ದಾನೆ. ಮನುಷ್ಯನಾದ ನಾನು ಹೇಳುವ ಜ್ಞಾನವು ಸರಿಯಾದುದಲ್ಲವೆಂದು ತಿಳಿಯುತ್ತಿಲ್ಲ. ಕೊನೆಗೆ ಮನುಷ್ಯ ದೇವರ ಜ್ಞಾನವನ್ನೇ

ಧಿಕ್ಕರಿಸಿ, ದೇವರು ತನ್ನನ್ನು ಮುಗಿಯಬೇಕೆಂದು ಹೇಳಿದಕಡೆ ಯಾರನ್ನೂ ಮುಗಿಯಬಾರದೆಂದಿದ್ದಾನೆ. ತಾನು ಹೇಳಿದವನಿಗೇ ಮುಗಿಯಬೇಕೆಂದು ಮನುಷ್ಯ ನಿರ್ಣಯಿಸಿ ಹೇಳುತ್ತಿದ್ದಾನೆ. ತಾನು ಹೇಳುವುದೇ ನಿಜವಾದ ಜ್ಞಾನವೆಂದು, ಹಾಗೆ ಆಚರಿಸಿದವನನ್ನೇ ದೈವಭಕ್ತನಾಗಿ, ದೇವರ ಮೇಲೆ ವಿಶ್ವಾಸ ಇರುವವನಾಗಿ ಲೆಕ್ಕಿಸುತ್ತೇವೆಂದು, ತಾವು ಹೇಳಿದ ಪದ್ಧತಿಯನ್ನು ಜಾರಿಗೆ ಮಾಡದಿರುವವನನ್ನು ಅಜ್ಞಾನಿಯಾಗಿ, ದೈವ ದ್ರೋಹಿಯಾಗಿ, ಅವಿಶ್ವಾಸನಾಗಿ ಲೆಕ್ಕಿಸುತ್ತೇವೆಂದು ಹೇಳುತ್ತಿದ್ದಾನೆ. ಅದೆಲ್ಲವೂ ಕೇಳಿದ ಮನುಷ್ಯರು ತಮ್ಮನ್ನು ಸಮಾಜದಿಂದ ಬಹಿಷ್ಕರಿಸುತ್ತಾರೆಂಬ ಭಯದಿಂದ ಅವರಿಗೆ ದೊಡ್ಡವರಾಗಿರುವವರ ಮಾತುಗಳನ್ನೇ ಕೇಳುತ್ತಿದ್ದಾರೆ. ಪ್ರತಿ ಸಮಾಜದಲ್ಲೂ ಆ ಸಮಾಜಕ್ಕೆ ಹಿರಿಯರು ಏರ್ಪಟ್ಟಿದ್ದು, ಸಮಾಜವನ್ನು ಅವರ ಹತೋಟಿಯಲ್ಲಿ ಇಟ್ಟುಕೊಂಡಿದ್ದಾರೆ. ಇವರನ್ನೇ ನಾವು ಕಬ್ಜಾದಾರರು ಎಂದು ಹೇಳುತ್ತಿದ್ದೇವೆ. ನಾವು ಎಲ್ಲರನ್ನು ಕೂಡಿಸಿ ಹಾಗೆ ಹೇಳಲಿಲ್ಲ ಆದರೆ **ದೈವಜ್ಞಾನಕ್ಕೆ ವ್ಯತಿರೇಕವಾಗಿ, ದೈವಗ್ರಂಥಕ್ಕೆ ವಿರುದ್ಧವಾಗಿರುವ ಅವರನ್ನು ಖಂಡಿತ ಜ್ಞಾನವನ್ನೇ ಕಬ್ಜಾ ಮಾಡಿದವರೆಂದು ಹೇಳಬಹುದು**.

ದೈವಜ್ಞಾನವನ್ನು ಕಬ್ಜಾ ಮಾಡಿದವರು ಸ್ವಲ್ಪಕಾಲವೇ ಬದುಕುವ ತಮ್ಮ ಜೀವನಕ್ಕೆ ಸಮಾಜದಲ್ಲಿ ಉನ್ನತ ಸ್ಥಾನ ಇರುವಹಾಗೆ, ತಮ್ಮನ್ನು ತಾವು ದೊಡ್ಡವರಾಗಿ ಪ್ರಕಟಿಸಿಕೊಂಡು, ದೇವರ ಜ್ಞಾನವನ್ನು ಆಜ್ಞಾಪಿಸುವವರಾಗಿ ಇದ್ದೂ, ತನಗೆಂದು ತನ್ನ ಸವಾಜದಲ್ಲಿ ಒಂದು ಸಾವ್ರಾಜ್ಯವನ್ನು ಸೃಷ್ಟಿಸಿಕೊಂಡಿದ್ದಾರೆ. ಮತವೆನ್ನುವ ಸಾಮ್ರಾಜ್ಯಕ್ಕೆ ತಾವು ದೊಡ್ಡವರಾಗಿದ್ದೂ, ದೇವರಿಗಿಂತಲೂ ದೊಡ್ಡದಾಗಿ ಗೌರವವನ್ನು ಹೊಂದಬೇಕೆಂದುಕೊಳ್ಳುತ್ತಿದ್ದಾರೆ. ದೇವರು ಮೂರು ಬಾರಿ, ಮೂರು ಸ್ಥಳಗಳಲ್ಲಿ, ಮೂರು ಸಮಯಗಳಲ್ಲಿ ಜ್ಞಾನ ಹೇಳಿದರೆ, ಅದನ್ನೇ ಅನುಕೂಲವಾಗಿ ಮಾಡಿಕೊಂಡು, ಮೂರುಬಾರಿ ಹೇಳಿದ ಜ್ಞಾನವನ್ನು ಮೂರು ಮತಗಳಾಗಿ ಮನುಷ್ಯ ಬದಲಾಯಿಸಿಕೊಂಡಿದ್ದಾನೆ. ದೇವರು ಮೂರುಬಾರಿ ಜ್ಞಾನವನ್ನು ಭೂಮಿಮೇಲೆ ತಿಳಿಸಿದರೇ, ಅದರಲ್ಲಿ

ಎರಡುಬಾರಿ ಸ್ವತಃವಾಗಿ ದೇವರೇ ಭಗವಂತನೆಂಬ ಮಾರುವೇಷದೊಂದಿಗೆ ಜ್ಞಾನವನ್ನು ಹೇಳುವುದು ನಡೆದಿದೆ. ಜ್ಞಾನವನ್ನು ಮೂರನೆಯಬಾರಿ ಹೇಳಿರುವಾಗ ತಾನು ಸ್ವತಃವಾಗಿ ಆಗಲಿ, ಭಗವಂತನೆಂಬ ಮಾರುವೇಷದಲ್ಲಿ ಆಗಲಿ ಹೇಳದೆ, ತನ್ನ ಜ್ಞಾನವನ್ನು ತಿಳಿದಿರುವ ಜ್ಞಾನಿಯಿಂದ ಹೇಳಿಸಿದ್ದಾನೆ. ಮೊದಲು ಭಾರತದೇಶದಲ್ಲಿ ಭಗವಂತನಾಗಿ ಹೇಳಿರುವ ಜ್ಞಾನವು 'ಭಗವದ್ಗೀತೆ' ಗ್ರಂಥ ರೂಪದಲ್ಲಿ ಪ್ರಥಮ ದೈವಗ್ರಂಥವಾಗಿ ಪ್ರಜೆಗಳ ಮಧ್ಯೆಯಲ್ಲಿ ಇರುವಾಗ, ಎರಡನೆಯ ಬಾರಿ ಇಜ್ರಾಯೇಲ್ ದೇಶದಲ್ಲಿ ಹೇಳಿದ ಜ್ಞಾನವು ನಾಲ್ಕು ಸುವಾರ್ತೆಗಳ ರೂಪದಲ್ಲಿ ಮಧ್ಯ ದೈವಗ್ರಂಥವಾಗಿ 'ಬೈಬಲ್' ಗ್ರಂಥದಲ್ಲಿ ಇದೆ. ಮೂರನೆಯ ಬಾರಿ ದೇವರ ಜ್ಞಾನ ತಿಳಿದಿರುವ ಮಹಾಜ್ಞಾನಿಯಾದ ಜಿಬ್ರಯೇಲ್ ಹೇಳಿದ ಜ್ಞಾನವು ಅಂತಿಮ ದೈವ ಗ್ರಂಥವಾಗಿ 'ಖುರಾನ್' ಗ್ರಂಥದಲ್ಲಿ ಇದೆ. ಮೂರು ಗ್ರಂಥಗಳಲ್ಲಿರುವುದು ಒಂದೇ ದೇವರ ಜ್ಞಾನವೇ ಆದರೂ, ಅದು ಮೂರಾಗಿ ಸೀಳಿಸಲ್ಪಟ್ಟು ಮೂರು ಮತ ಸಾಮ್ರಾಜ್ಯಗಳಾಗಿ ಏರ್ಪಟ್ಟಿದೆ. ದೈವಜ್ಞಾನವನ್ನು ಕಬ್ಜಾ ಮಾಡಿರುವ ಮತಹಿರಿಯರು ಮತ ಸಾಮ್ರಾಜ್ಯಗಳನ್ನು ಸೃಷ್ಟಿಸಿ ಪ್ರಜೆಗಳನ್ನು ಮೂರು ಗುಂಪುಗಳಾಗಿ ಸೀಳಿಸಿ ಹಾಕಿದ್ದಾರೆ. ಆಯಾ ಮತಹಿರಿಯರಾಗಿ ವ್ಯವಹರಿಸುವವರು ದೈವಗ್ರಂಥಗಳಲ್ಲಿ ಎಷ್ಟುಮಾತ್ರ ಹೇಳದ ಮತಗಳನ್ನು ಸೃಷ್ಟಿಸಿಕೊಂಡು, ಆ ಮತದವರು ತಮ್ಮ ಹತೋಟಿಯಲ್ಲಿ ಇರುವಹಾಗೆ, ಮತ ನಿಯಮಗಳನ್ನು ಸ್ವತಹವಾಗಿ ಏರ್ಪಡಿಸಿದ್ದಾರೆ. ಮತ ನಿಯಮಗಳನ್ನು ಕೂಡಾ ದೇವರ ಜ್ಞಾನವಾಗಿ ಪ್ರಚಾರ ಮಾಡಿ, ಅದನ್ನು ಉಲ್ಲಂಘಿಸಬಾರದೆಂದು, ಅದನ್ನು ಅತಿಕ್ರಮಿಸಿದವನು ದೇವರ ಮಾತನ್ನು ಅತಿಕ್ರಮಿಸಿದಹಾಗೆಯೇ ಎಂದು ಹೇಳಿ ಭಯವನ್ನು ಏರ್ಪಡಿಸಿದ್ದಾರೆ. ಮತನಿಯಮಗಳನ್ನೇ ಅವರ ಜೀವನದಲ್ಲಿ ಆಚರಿಸುವಂತೆ ಮಾಡಿ, ಅವುಗಳನ್ನೇ ದೇವರು ಹೇಳಿದ ಜೀವನ ವಿಧಾನಗಳೆಂದು ಹೇಳಿದ್ದಾರೆ. ವಾಸ್ತವವಾಗಿ ದೇವರು ತನ್ನ ಗ್ರಂಥಗಳಲ್ಲಿ ಮತವನ್ನಾಗಲಿ, ಮತ ವಿಧಾನವನ್ನಾಗಲಿ ಎಲ್ಲಿಯೂ ಹೇಳಲಿಲ್ಲ. ಭಗವದ್ಗೀತೆಯಲ್ಲಿ ಹಿಂದೂಗಳನ್ನು ಜುಟ್ಟು ಬೆಳೆಸಬೇಕೆಂದಾಗಲಿ, ಖುರಾನ್‌ನಲ್ಲಿ ಗಡ್ಡವನ್ನು ಬೆಳೆಸಬೇಕೆಂದಾಗಲಿ ಹೇಳಲಿಲ್ಲ. ಹಾಗೆಯೇ ಬೈಬಲ್‌ನಲ್ಲಿ ಕ್ರೈಸ್ತವರು

ಭಾನುವಾರವೇ ಪ್ರಾರ್ಥನೆ ಮಾಡಬೇಕೆಂದಾಗಲಿ ಹೇಳಲಿಲ್ಲ. ದೇವರು ತನ್ನ ಮೂರು ಗ್ರಂಥಗಳಾದ ಪ್ರಥಮ, ಮಧ್ಯ, ಅಂತಿಮ ದೈವಗ್ರಂಥಗಳಲ್ಲಿ ಹೇಳದ ವಿಷಯಗಳನ್ನು ಮತ ನಿಯಮಗಳಲ್ಲಿ ಏರ್ಪಡಿಸಿಕೊಂಡಿದ್ದಾರೆ. ಮನುಷ್ಯ ಸೃಷ್ಟಿಸಿದ ಮತ ನಿಯಮಗಳನ್ನು ದೇವರ ಮಾತುಗಳಾಗಿ ಹೇಳಿ, ದೈವಗ್ರಂಥಗಳಲ್ಲಿ ಹೇಳಿದ ಜ್ಞಾನಕ್ಕಿಂತಲೂ ಮತ ನಿಯಮಗಳೇ ಮುಖ್ಯವೆಂದು ಮತ ಹಿರಿಯರು ಪ್ರಚಾರ ಮಾಡಿದ್ದಾರೆ.

ಪ್ರಪಂಚದಲ್ಲಿ ಒಟ್ಟು ಹನ್ನೆರಡು ಮತಗಳಿರುವಾಗ, ಅದರಲ್ಲಿ ಮೂರು ಪೂರ್ತಿಯಾಗಿ ದೈವ ಸಂಬಂಧವಾಗಿರುವವೆಂದು ಹೇಳಬಹುದು. ಈ ಮೂರರಲ್ಲಿ ಎರಡು ಗ್ರಂಥಗಳನ್ನು ಸ್ವತಃವಾಗಿ ಭಗವಂತನು ಹೇಳಿದರೆ, ಅಂತಿಮ ದೈವಗ್ರಂಥವನ್ನು ದೈವಜ್ಞಾನಿ ಹೇಳುವುದು ನಡೆದಿದೆ. ಉಳಿದ ಒಂಭತ್ತು ಮತಗಳನ್ನು ಮನುಷ್ಯರೇ ಸೃಷ್ಟಿಸಿಕೊಂಡಿದ್ದಾರೆ. ಆದ್ದರಿಂದ ಆ ಒಂಭತ್ತು ಮತಗಳ ಪ್ರಸ್ತಾವನೆಯನ್ನು ನಾವು ತೆಗೆದುಕೊಳ್ಳುತ್ತಿಲ್ಲ. ದೇವರ ಜ್ಞಾನವು ಒಳಗೊಂಡಿರುವ ಮೂರು ಮತಗಳನ್ನು ಕುರಿತು ಮಾತ್ರವೇ ಹೇಳಿಕೊಳ್ಳುತ್ತಿದ್ದೇವೆ. ಮೂರು ದೈವಗ್ರಂಥಗಳಲ್ಲಿನ ದೈವಜ್ಞಾನವು ಮೂರು ಮತಗಳಾಗಿ ಬದಲಾವಣೆಹೊಂದಿ, ಪೂರ್ತಿ ಮತಹಿರಿಯರಿಂದ ಕಬ್ಜಾವಾಗಿದೆ. ಒಂದು ಮತ ಹೆಚ್ಚು ಮತ್ತೊಂದು ಮತ ಕಡಿಮೆ ಎನ್ನದೇ ಮೂರೂ ದೈವವಾಕ್‌ಗಳಿಗೆ ವಿರುದ್ಧವಾಗಿ ವ್ಯವಹರಿಸುತ್ತಿವೆ. ಅಷ್ಟೇ ಅಲ್ಲದೇ ದೈವಜ್ಞಾನದ ಪ್ರಕಾರ ನಡೆದುಕೊಳ್ಳುವವನನ್ನು ಮೂರು ಸಮಾಜಗಳು ಬಹಿಷ್ಕರಿಸುವುದೇ ಅಲ್ಲದೆ, ಅಂತಹ ಜ್ಞಾನಿಯನ್ನು ಬಹಳ ಕಷ್ಟಗಳ ಪಾಲು ಮಾಡುತ್ತಿದ್ದಾರೆ. ಪರಮತ ಜ್ಞಾನವನ್ನು ಅನುಸರಿಸುತ್ತಿರುವೆ ಎಂಬ ನೆಪದಿಂದ ಅನೇಕ ರೂಪಗಳಲ್ಲಿ ಹಿಂಸಿಸುತ್ತಿದ್ದಾರೆ. ಒಂದು ನಿಜವಾದ ಜ್ಞಾನಿ ಭಗವದ್ಗೀತೆಯಲ್ಲಿ ಇರುವ ಜ್ಞಾನವನ್ನು ಹೇಳಿದರೆ, ಹಾಗೆ ಹೇಳಬಾರದೆನ್ನುವ ಹಿಂದೂಗಳು ಇದ್ದಾರೆ. ಹೀಗೆಯೇ ಹೇಳಬೇಕೆಂದು, ಅವರ ಉದ್ದೇಶದ ಪ್ರಕಾರ ಹೇಳಬೇಕೆಂದು ಆಜ್ಞಾಪಿಸುವವರು ಇದ್ದಾರೆ. ಅವರು ಹೇಳಿದಹಾಗೆ ಕೇಳದೇ ದೇವರು ಹೇಳಿದ ಜ್ಞಾನವನ್ನು ಇದ್ದದ್ದು ಇದ್ದಹಾಗೆ ಹೇಳುತ್ತೇನೆ ಎಂದರೆ, ಅಂತಹ ನಿಜವಾದ ಜ್ಞಾನಿಯನ್ನು

ಆ ಮತದವರೇ ಭೌತಿಕವಾಗಿ, ಮಾನಸಿಕವಾಗಿ ಹಿಂಸಿಸುವುದನ್ನು ಮೊದಲು ಮಾಡುವರು.

ನಿಜವಾದ ಜ್ಞಾನಿಗೆ ಮೂರು ಮತಗಳಲ್ಲಿಯೂ ಪರಾಭವವೇ ಎದುರಾಗುತ್ತಿರುತ್ತದೆ. ಭಗವದ್ಗೀತೆಯಲ್ಲಿನ ಜ್ಞಾನವನ್ನು ಇದ್ದದ್ದು ಇದ್ದಹಾಗೆ ಹೇಳಿದರೆ, ಹಿಂದೂ ಮತಹಿರಿಯರು ಒಪ್ಪಿಕೊಳ್ಳುವುದಿಲ್ಲ. ಹಾಗೆಯೇ ಬೈಬಲ್‌ನಲ್ಲಿನ ನಾಲ್ಕು ಸುವಾರ್ತೆಗಳಲ್ಲಿನ ಜ್ಞಾನವನ್ನು ಇದ್ದದ್ದು ಇದ್ದಹಾಗೆ ಹೇಳಿದರೆ, ಕ್ರೈಸ್ತವ ಮತಹಿರಿಯರು ಒಪ್ಪಿಕೊಳ್ಳುವುದಿಲ್ಲ. ಅದೇ ವಿಧವಾಗಿ ಅಂತಿಮ ದೈವ ಗ್ರಂಥವಾದ ಖುರಾನ್ ಗ್ರಂಥದಲ್ಲಿನ ಜ್ಞಾನವನ್ನು ಇದ್ದದ್ದು ಇದ್ದಹಾಗೆ ಹೇಳಿದರೆ, ಮುಸ್ಲಿಮ್ ಹಿರಿಯರು ಒಪ್ಪಿಕೊಳ್ಳುವುದಿಲ್ಲ. ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು. ಹಿಂದೂ ಆದವನು ಭಗವದ್ಗೀತೆಯನ್ನು ಹೇಳಿದರೆ ಸ್ವಾಮೀಜಿಗಳು, ಗುರುಗಳು ಏಕೆ ಒಪ್ಪಿಕೊಳ್ಳುವುದಿಲ್ಲ? ಅವರು ಹೇಳುವುದು ಸಹಾ ಭಗವದ್ಗೀತೆಯೇ ಅಲ್ಲವೇ! ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇರುವುದು ನೋಡಿರಿ. ಹಿಂದೂಗಳಲ್ಲಿನ ಹಿರಿಯರು ಭಗವದ್ಗೀತೆಯನ್ನು ಒಪ್ಪಿಕೊಂಡರೂ ಗೀತೆಯಲ್ಲಿನ ನಿಜವಾದ ಭಾವವನ್ನು ಒಪ್ಪಿಕೊಳ್ಳುವುದಿಲ್ಲ. ಭಗವದ್ಗೀತೆಯಲ್ಲಿ ಒಂದು ಶ್ಲೋಕಕ್ಕೆ ಅವರು ಹೇಳಿರುವ ಭಾವವನ್ನೇ ಇತರರು ಕೂಡ ಹೇಳಬೇಕು, ಹಾಗೆ ಹೇಳದೇ ಹೋದರೆ ಅವನನ್ನು ಜ್ಞಾನಿಯಲ್ಲವೆನ್ನುತ್ತಾರೆ. ಗೀತೆಯಲ್ಲಿನ ಶ್ಲೋಕಗಳಲ್ಲಿ ದೇವರು ಏನು ಹೇಳಿದ್ದಾನೆ ಎನ್ನುವುದು ಅವರಿಗೆ ಮುಖ್ಯವಲ್ಲ. ಅವರು ಏನು ನಿರ್ಣಯಿಸಿದ್ದಾರೋ ಅದೇ ಹೇಳಬೇಕು. ಹಾಗೆ ಹೇಳದೇ ಹೋದರೆ ಎಂತಹ ಜ್ಞಾನಿಯನ್ನಾದರು ಅಜ್ಞಾನಿ ಕೆಳಕ್ಕೆ ಜಮಕಟ್ಟುತ್ತಾರೆ. ಉದಾಹರಣೆಗೆ ಭಗವದ್ಗೀತೆಯಲ್ಲಿ ಆರನೆಯ ಅಧ್ಯಾಯವಾದ ಆತ್ಮಸಂಯಮ ಯೋಗದಲ್ಲಿ ಮೊದಲ ಶ್ಲೋಕವನ್ನು ನೋಡಿದರೆ ಅದರಲ್ಲಿ **'ನನಿರಗ್ನಿ'** ಎಂಬ ಪದವಿರುವುದು. ಶ್ಲೋಕವನ್ನು ನೋಡಿರಿ.

***ಶ್ಲೋ॥ ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ॥***
***ಸಸನ್ಯಾಸೀಚ ಯೋಗೀಚ ನನಿರಗ್ನಿ ರ್ನಚಾಕ್ರಿಯಃ॥॥***

ಈ ಶ್ಲೋಕಕ್ಕೆ ಹಿಂದೂ ಮತದಲ್ಲಿನ ಎಷ್ಟೋ ಪಂಡಿತರು, ಸ್ವಾಮೀಜಿಗಳು, ಗುರುಗಳಾಗಿರುವವರು, ಪೀಠಾದಿಪತಿಗಳಾಗಿರುವವರು ಮತ್ತು ಶಂಕರಾಚಾರ್ಯ, ರಾಮಾನುಜಾಚಾರ್ಯ ಮೊದಲಾದ ಸಿದ್ಧಾಂತಕರ್ತರು ಬರೆದ ಭಾವದಲ್ಲಿ ಅವರ ಉದ್ದೇಶದಪ್ರಕಾರ 'ಅಗ್ನಿ ಹೋತ್ರ ಮಾಡದವನು, ಅಗ್ನಿಯಿಂದ ಯಜ್ಞಗಳು ಮಾಡದವನು' ಎಂದು ಬರೆದುಕೊಂಡಿದ್ದಾರೆ. ಆದರೆ ನಿಜವಾದ ಜ್ಞಾನಿಯಾದವನು ಎಲ್ಲರಿಗೂ ವಿರುದ್ಧವಾಗಿ "ದೇವರ ಜ್ಞಾನಕ್ಕೆ, ಅಗ್ನಿಹೋತ್ರಕ್ಕೆ, ಯಜ್ಞಗಳಿಗೆ ಸಂಬಂಧ ಇಲ್ಲವೆಂದು ಹೇಳುತ್ತಾ, ದೇವರು ಹೇಳಿದ ಭಾವವು ಅದಲ್ಲವೆಂದು, ಜ್ಞಾನವೆಂಬ ಅಗ್ನಿ ಇಲ್ಲದವನು ಎನ್ನುವುದೇ ನಿಜವಾದ ಭಾವವೆಂದು" ಹೇಳುತ್ತಿರುವನು. ಈದಿನದ ಭಗವದ್ಗೀತೆಗಳೆಲ್ಲದರಲ್ಲು "ನನಿರಗ್ನಿ" ಎಂಬ ಪದಕ್ಕೆ ಯಜ್ಞಗಳು ಮಾಡದವನೆಂದೇ ಬರೆದಿದ್ದಾರೆ. ಅದು ಹಾಗಿರುವಾಗ ಯಾರಾದರು ಒಬ್ಬನು ಜ್ಞಾನಾಗ್ನಿ ಎಂದು ಅರ್ಥ ಹೇಳಿದರೇ, ಅವನನ್ನು ಯಾರು ಒಪ್ಪಿಕೊಳ್ಳದೆ ಎಲ್ಲರೂ ಸೇರಿ ಹಾಗೆ ಹೇಳಿದವನನ್ನು ಹಿಂದೂಮತದಿಂದ ಹೊರಹಾಕುವರು. ಅಷ್ಟೇ ಅಲ್ಲದೆ ಅವನನ್ನು ಪರಮತವನ್ನು ಬೋಧಿಸುತ್ತಿರುವನೆಂಬ ನೆಪದಿಂದ ಹಿಂಸಿಸುತ್ತಾರೆ. ಇಲ್ಲಿ ವಾಸ್ತವವನ್ನು ಗ್ರಹಿಸಿದರೆ ಎಲ್ಲರೂ ಬರೆದಹಾಗೆ ಅಗ್ನಿ ಹೋತ್ರವನ್ನು ಮಾಡದವವನು ಎನ್ನುವುದು ತಪ್ಪು, ಜ್ಞಾನಾಗ್ನಿ ಇಲ್ಲದವನು ಎನ್ನುವುದು ಸತ್ಯ. ಆದರೂ ಹಿಂದೂ ಮತದಲ್ಲಿನ ಹಿರಿಯರೆಲ್ಲರೂ ಈ ಸತ್ಯವನ್ನು ಒಪ್ಪಿಕೊಳ್ಳುತ್ತಾರಾ ಎಂದರೆ ಒಪ್ಪಿಕೊಳ್ಳುವುದಿಲ್ಲ. ಅವರು ಹೇಳಿರುವುದೇ ಸತ್ಯವೆಂದು, ಅವರು ಹೇಳಿರುವುದೇ ನಿಜಭಾವವೆಂದು ಹೇಳುವುದಕ್ಕೇ ಪ್ರಯತ್ನಿಸುತ್ತಾರೆ. ನಿಜ ಹೇಳಿದವನನ್ನು ನಿಂದಿಸುತ್ತಾರೆ.

ಉಳಿದ ಎರಡು ಗ್ರಂಥಗಳಿಗೆ ಮಾತೃಗ್ರಂಥವಾಗಿರುವ ಭಗವದ್ಗೀತೆ ಯಲ್ಲಿಯೇ ಇಷ್ಟು ಗೊಂದಲವಿದ್ದರೇ ಅದಕ್ಕೆ ಅನುಬಂಧ ಜ್ಞಾನವಾಗಿರುವ ಬೈಬಲ್, ಖುರಾನ್ ಗ್ರಂಥಗಳಲ್ಲಿಯೂ ಕೂಡಾ ಹಾಗೆಯೇ ಇರುತ್ತದೆ. ಒಂದು ವಿಧವಾಗಿ ಹೇಳಿದರೆ ಉಳಿದ ಎರಡು ಗ್ರಂಥಗಳಲ್ಲಿ ಇಲ್ಲದ ಗೊಂದಲಗಳು, ಹಾಗೂ ಎರಡು ಮತಗಳಲ್ಲಿ ಇಲ್ಲದ ಅನಿಶ್ಚಿತ ಹಿಂದೂಮತದಲ್ಲಿನ

ಭಗವದ್ಗೀತೆಯಲ್ಲಿ ಇರುವುದೆಂದು ಹೇಳಬಹುದು. ಉಳಿದ ಎರಡು ಮತಗಳವರು ನಾವು ಇಂಥಾ ಮತದವರೆಂದು ಪ್ರಜ್ಞಾಪೂರ್ವಕರಾಗಿದ್ದು ಅವರ ಮತವನ್ನೂ, ಅವರ ಮತಸ್ಥರನ್ನೂ ಅವರು ಗೌರವಿಸುತ್ತಿರುವಾಗ, ಹಿಂದೂಮತದಲ್ಲಿ 'ನಾವು ಹಿರಿಯರು ನಾವು ದೊಡ್ಡವರು' ಎಂಬ ಪೈಪೋಟಿ ತತ್ವ ಹೊಂದಿರುವರಿದ್ದು, ಅವರ ಮತಸ್ಥರನ್ನೇ ಅವರು ಹೇಳನ ಮಾಡಿಕೊಳ್ಳುತ್ತಿದ್ದಾರೆ. ತಮಗೆ ವಿರುದ್ಧವಾಗಿ ಮಾತನಾಡಿದವನನ್ನು ಹಿಂದೂ ಮತಸ್ಥನೇ ಅಲ್ಲವೆನ್ನುತ್ತಿದ್ದಾರೆ. ಹಿಂದೂಮತವು ಎಲ್ಲದಿಕ್ಕಿಂತಲೂ ಮೊದಲಿನಿಂದಿದ್ದರೂ, ಪೂರ್ವವು ಸಂಖ್ಯೆಯಲ್ಲಿ ಹೆಚ್ಚು ದೊಡ್ಡದಾದರೂ, ಈದಿನ ಹಿಂದೆ ಹುಟ್ಟಿರುವ ಕ್ರೈಸ್ತವ ಮತಕ್ಕಿಂತಲೂ, ಮುಸ್ಲಿಮ್ ಮತಕ್ಕಿಂತಲೂ ಹಿಂದುಳಿದು, ಸಂಖ್ಯೆಯಲ್ಲಿ ಮೂರನೆಯ ಸ್ಥಾನದಲ್ಲಿದೆ. ಹಿಂದೂ ಮತದಲ್ಲಿ ಒಂದು ವರ್ಗದವರೇ ಹೆಚ್ಚು ದೊಡ್ಡಸ್ತಿಕೆ ಹೊಂದಿದ್ದು, ಎಲ್ಲರಿಗಿಂತಲೂ ನಾವೇ ದೊಡ್ಡ ಜ್ಞಾನಿಗಳೆಂದು ಚಲಾವಣೆ ಆಗಬಲ್ಲರು. ಹಾಗೆ ಚಲಾವಣೆ ಆಗುವ ವರ್ಗವು ತಮಗಾಗಲಿ, ತಮ್ಮ ಆಚರಣೆಗಳಿಗಾಗಲಿ, ತಾವು ಹೇಳಿರುವ ಜ್ಞಾನಕ್ಕಾಗಲಿ ವಿರುದ್ಧವಾಗಿ ಮಾತನಾಡಿದವರನ್ನು ತಮ್ಮ ಮತದಿಂದ ಬಹಿಷ್ಕಾರ ಹಾಕುವುದರಿಂದ, ಆ ವರ್ಗದವರು ಉಳಿದ ಪ್ರಜೆಗಳ ಮೇಲೆ ತೋರುವ ವಿವಕ್ಷದಿಂದ, ಉಳಿದವರೆಲ್ಲರನ್ನೂ ಅಂಟಬಾರದವರನ್ನಾಗಿ ನೋಡುವುದರಿಂದ, ಹಿಂದೂ ಮತದಲ್ಲಿನ ಸಂಖ್ಯೆ ಕಡಿಮೆಯಾಗುತ್ತಾ ಬಂದಿದೆಯೆಂದು ಹೇಳಬಹುದು.

ಉದಾಹರಣೆಗೆ ಗೌತಮಬುದ್ಧನು ಭಾರತದೇಶದಲ್ಲಿ ಹಿಂದೂ ಮತದಲ್ಲಿ ಹುಟ್ಟಿದವನೇ ಆಗಿದ್ದರೂ, ಗೌತಮನು ತಮಗೆ ವಿರುದ್ಧವಾದ ಜ್ಞಾನವನ್ನು ಪ್ರಚಾರ ಮಾಡಿದ್ದಾನೆಂದು ಹಿಂದೂಮತದಲ್ಲಿ ದೊಡ್ಡವರಾಗಿ ಚಲಾವಣೆ ಆಗುವವರು ಗೌತಮಬುದ್ಧನನ್ನು ಹಿಂದೂಮತದಿಂದ ಬಹಿಷ್ಕರಿಸಿ, ಆತನು ಇತರ ಮತವನ್ನು ಬೋಧಿಸುತ್ತಿದ್ದಾನೆಂದು ಪ್ರಚಾರ ಮಾಡಿದ್ದಾರೆ. ಆಗಿನಿಂದ ಗೌತಮಬುದ್ಧನದು ಬೌದ್ಧಮತವಾಗಿ ಹೇಳಲ್ಪಟ್ಟಿದೆ. ಆದಿನ ಹಿಂದೂಗಳೇ ಬುದ್ಧನದು ಪ್ರತ್ಯೇಕವಾದ ಮತವೆಂದು ಹಿಂದೂಮತವಲ್ಲವೆಂದು ಹೇಳಿರುವುದರಿಂದ, ಆದಿನ ಪ್ರತ್ಯೇಕವಾದ ಬೌದ್ಧಮತವು ತಯಾರಿಗಿದೆ. ನಂತರ

ಕಾಲದಲ್ಲಿ ಹಿಂದೂಮತದಲ್ಲಿನ ಅಂಟಬಾರದತನವು, ಕೆಲವರು ನಾವು ಮತಹಿರಿಯರೆಂದು ಪ್ರವರ್ತಿಸುವ ರೀತಿ, ಇತರರಿಗ್ಯಾರಿಗೂ ಜ್ಞಾನ ತಿಳಿಯದೇ ಮಾಡಿರುವುದರಿಂದ, ನಾವು ಹೊರತು ಯಾರೂ ಜ್ಞಾನಿಗಳಾಗಿ ಇರಬಾರದೆಂಬ ಅಸೂಯೆ ಮೊದಲಾದ ಕಾರಣಗಳು ಹಿಂದೂ ಮತವನ್ನು ಕ್ಷೀಣಿಸುವಂತೆ ಮಾಡಿವೆ. ಹಿಂದೂ ಮತದಲ್ಲಿ ಒಂದೇ ಕುಲವರ್ಗಕ್ಕೆ ಸೇರಿದವರು ತಾವು ಹೊರತು ಇತರರು ಜ್ಞಾನಿಗಳಾಗಿ, ಗುರುಗಳಾಗಿ ಇರಬಾರದೆಂಬ ಭಿನ್ನಾಭಿಪ್ರಾಯವೇ ಹಿಂದೂಮತದಿಂದ ಬೌದ್ಧಮತವನ್ನು ಸೀಳುವಂತೆ ಮಾಡಿದೆ. ಆದಿನ ಗೌತಮಬುದ್ಧನು ಕ್ಷತ್ರಿಯನಾಗಿದ್ದರಿಂದ ಕುಲ ಭಿನ್ನಾಭಿಪ್ರಾಯದಿಂದ ಹಿಂದೂ ಮತದಿಂದ ಬಹಿಷ್ಕರಿಸುವುದು ನಡೆಯಿತು. ಇಂದಿಗೂ ಅದೇ ವಿಧಾನದಿಂದ ಇತರ ಕುಲಸ್ಥರು ಯಾರಾದರು ಜ್ಞಾನಿಗಳಾಗಿ ಬದಲಾದರೆ ಅವನನ್ನು ಹಿಂದುವೇ ಅಲ್ಲವೆನ್ನುವ ಪರಿಸ್ಥಿತಿ ಹಿಂದುಗಳಲ್ಲಿ ನೆಲೆಗೊಂಡಿದೆ. ಈ ಮಾತು ನಮ್ಮ ಸ್ವಂತ ಅನುಭವದಿಂದ ಹೇಳುತ್ತಿದ್ದೇವೆ. ಅದ್ವೈತವು, ದ್ವೈತವೆಂಬ ಆಧ್ಯಾತ್ಮಿಕ ಸಿದ್ಧಾಂತಗಳು ಸ್ವಲ್ಪ ಕಾಲದಿಂದ ಹಿಂದೂ ಮತದಲ್ಲಿವೆ. ಆದರೆ ಈದಿನ ತ್ರೈತ ಸಿದ್ಧಾಂತವನ್ನು ನಿಜವಾದ ಆಧ್ಯಾತ್ಮಿಕ ಸಿದ್ಧಾಂತವಾಗಿ ಈದಿನ ನಾವು ಹೇಳುತ್ತಿದ್ದೇವೆ. ಆದರೆ ಹಿಂದೂಮತದಲ್ಲಿ ಜ್ಞಾನವನ್ನು ಕಬ್ಜಾ ಮಾಡಿರುವವರು ನಮ್ಮನ್ನು ಹಿಂದುವೇ ಅಲ್ಲವೆಂದು, ತ್ರೈತವೆಂದರೆ ಕ್ರೈಸ್ತವವೆಂದು, ಹಿಂದೂ ಮುಸುಗಿನಲ್ಲಿ ಕ್ರೈಸ್ತವವನ್ನು ಪ್ರಚಾರ ಮಾಡುತ್ತಿದ್ದಾರೆಂದು ಹಿಂದುವಾಗಿರುವ ನಮ್ಮನ್ನು ಕೂಡಾ ಕ್ರೈಸ್ತವಮತದೊಳಗೆ ಸೇರಿಸಿ ಮಾತನಾಡುತ್ತಿದ್ದಾರೆ.

ಈ ವಿಧವಾಗಿ ಹಿಂದೂಮತದಲ್ಲಿನ ಹಿಂದುಗಳ ಸಂಖ್ಯೆ ಕ್ಷೀಣಿಸಿ ಹೋಗುತ್ತಿದೆ. ಈದಿನ ಹಿಂದೂ ಮತವು ಕ್ಷೀಣಿಸಿ ಹೋಗುತ್ತಿರುವುದೆಂದು ಗ್ರಹಿಸಿದ ಕೆಲವರು ಮತರಕ್ಷಣೆ ಗುಂಪುಗಳಾಗಿ, ಸಂಘಗಳಾಗಿ ತಯಾರಾದರೂ ಅವರಿಗೆ ಭಗವದ್ಗೀತೆಯಲ್ಲಿನ ಜ್ಞಾನವೇನೋ ತಿಳಿದಿಲ್ಲ. ಜ್ಞಾನವು ತಿಳಿಯದ ಮತಸಂಘಗಳು ಜ್ಞಾನವನ್ನು ಕಬ್ಜಾ ಮಾಡಿರುವವರ ಮಾತುಗಳನ್ನೇ

ಕೇಳುವುದರಿಂದ, ಅವರು ಕೂಡಾ ಸ್ವಾಧೀನರಾಗಿ ಕಬ್ಜಾದಾರರ ಕೈಯಲ್ಲಿ ಇದ್ದೇವೆಂದು ತಿಳಿಯದೆ ಅವರು ಹೇಗೆ ನಡೆಸಿದರೆ ಹಾಗೆ ನಡೆಯುತ್ತಿದ್ದಾರೆ. ಮತರಕ್ಷಣೆ ಎಂಬ ಹೆಸರಿನಲ್ಲಿ ಯಾರನ್ನು ಹೊಡೆಯಿರೆಂದರೆ ಅವರನ್ನು ಹೊಡೆಯುತ್ತಿದ್ದಾರೆ. ಏನು ಮಾತನಾಡಿರೆಂದರೆ ಅದನ್ನು ಮಾತನಾಡುತ್ತಿದ್ದಾರೆ. ಕಬ್ಜಾದಾರರು ಆಡಿಸಿದಂತೆ ಆಡುತ್ತಿರುವ ಹಿಂದೂರಕ್ಷಣೆ ಸಂಸ್ಥೆಗಳು ಹಿಂದೂಗಳಾದರೂ, ಹಿಂದೂ ಜ್ಞಾನವನ್ನು ತಿಳಿಯದ ಸ್ಥಿತಿಯಲ್ಲಿದ್ದು, ತಮ್ಮ ಹಿಂದೂಗಳನ್ನೇ ಗುರುತಿಸದೆ, ಹಿಂದೂಗಳ ಮೇಲೆಯೇ ಹಿಂದೂಗಳು ದಾಳಿ ಮಾಡುತ್ತಿದ್ದಾರೆ.

ಹಿಂದೂಗಳಲ್ಲಿ ಎಷ್ಟೋ ಬುದ್ಧಿವಂತರಿದ್ದಾರೆ. ಎಷ್ಟು ಬುದ್ಧಿವಂತ ನಾದರೂ ಇತರರನ್ನು ನಂಬುವುದರಿಂದ ಅವರ ಕೈಯಲ್ಲಿ ಸುಲಭವಾಗಿ ಮೋಸಹೋ ಗುತ್ತಿದ್ದಾನೆ. ಎಷ್ಟೋ ದೊಡ್ಡ ಪದವಿಧರರು ವಿದ್ಯಾವಂತರು ಸಹಿತ, ಎಷ್ಟೋ ವಿಜ್ಞಾನವಿರುವವರು ಸಹಿತ, ಜ್ಞಾನ ಕಬ್ಜಾದಾರರ ಕೈಯಲ್ಲಿ ಸುಲಭವಾಗಿ ಮೋಸಹೋಗುತ್ತಿದ್ದಾರೆ. ಉಳಿದ ಪ್ರಪಂಚ ವಿಷಯಗಳಲ್ಲಿ ಎಷ್ಟೋ ಬುದ್ಧಿವಂತರಾಗಿ ಪ್ರವರ್ತಿಸುವವರು ದೇವರ ಜ್ಞಾನವಿಷಯದಲ್ಲಿ ಸ್ವಲ್ಪವೂ ವಿಚಕ್ಷಣೆ ಇಲ್ಲದೇ ಪ್ರವರ್ತಿಸುತ್ತಿದ್ದಾರೆ. ಈ ಕೆಲಸ ಹೀಗೆಯೇ ಮಾಡಬೇಕೆಂದು ಕಬ್ಜಾದಾರರು ಹೇಳಿದಂತೆ ಕೇಳುತ್ತಿದ್ದಾರೆ. ಎಲ್ಲಿ ಬಗ್ಗಬೇಕೆಂದರೆ ಅಲ್ಲಿ ಬಗ್ಗುತ್ತಿದ್ದಾರೆ. ಎಲ್ಲಿ ಎದ್ದೇಳು ಎಂದರೆ ಅಲ್ಲಿ ಎದ್ದೇಳುತ್ತಿದ್ದಾರೆ. ಇದು ಯಾಕೆ ಮಾಡಬೇಕು? ಇದರ ಅರ್ಥವೇನು? ಇದರ ವಿವರವೇನು? ಎಂದು ಪ್ರಶ್ನಿಸದೆ ಹೇಗೆ ಹೇಳಿದರೆ ಹಾಗೆ ಮಾಡುತ್ತಿದ್ದಾರೆ. ಹಾಗೆ ಮಾಡುವುದಕ್ಕೆ ಒಂದೇ ಒಂದು ಕಾರಣವಿದೆ. ಅವರು ತಿಳಿದವರೆಂದು ಇವರು ನಂಬುವುದರಿಂದ ಅವರು ಸುಲಭವಾಗಿ ಮೋಸ ಮಾಡುತ್ತಿದ್ದಾರೆ. ಪ್ರಜೆಗಳು ಬುದ್ಧಿವಂತರೇ ಆದರೂ ಪ್ರಜೆಗಳಲ್ಲಿನ ನಂಬಿಕೆಯನ್ನು ಆಧಾರವಾಗಿ ಮಾಡಿಕೊಂಡು ಕಬ್ಜಾದಾರರು ಪ್ರಜೆಗಳನ್ನು ಮೋಸ ಮಡುತ್ತಿದ್ದಾರೆ. ಮೋಸವನ್ನು ಕುರಿತು ನಾವು ಮೊದಲೇ ಹೇಳಿಕೊಂಡಿದ್ದೇವೆ. ನಂಬಿಕೆ ಇರುವಾಗ ಎಷ್ಟು ಬುದ್ಧಿವಂತನಾದರೂ ಮೋಸಹೋಗದೆ ತಪ್ಪೋಲ್ಲ.

ಮೋಸಹೋದ ನಂತರ ಅವರಲ್ಲಿನ ಬುದ್ಧಿಯನ್ನನುಸರಿಸಿ ಕೆಲವರು ತಾವು ಮೋಸಹೋದೆವೆಂದು ಗ್ರಹಿಸಬಹುದು. ಕೆಲವು ವಿಷಯಗಳಲ್ಲಿ ಮೋಸವು ಬೇಗನೇ ಹೊರಬೀಳುತ್ತದೆ. ಆದರೇ ಕೆಲವು ವಿಷಯಗಳಲ್ಲಿ ಮೋಸವು ಬೇಗ ಹೊರಬೀಳುವುದಿಲ್ಲ. ದೇವರ ಜ್ಞಾನ ವಿಷಯಗಳಲ್ಲಿ ಪ್ರಜೆಗಳಿಗೆ ವಿಚಕ್ಷಣೆಯಾಗಲಿ, ವಿವರವಾಗಲಿ ತಿಳಿಯದೆ ಹೋಗಿರುವುದರಿಂದ ಎಷ್ಟು ಬುದ್ಧಿವಂತರಾದರೂ ದೇವರ ವಿಷಯದಲ್ಲಿ ತಾವು ಮೋಸ ಹೋಗಿದ್ದೇವೆಂದು ಗುರುತಿಸಲಾರರು. ಮನುಷ್ಯನಿಗೆ ಪ್ರಪಂಚ ವಿಷಯಗಳಲ್ಲಿ ತಿಳಿದಷ್ಟು, ಜ್ಞಾನದ ವಿಷಯಗಳಲ್ಲಿ ತಿಳಿಯದೆ ಹೋಗಿರುವುದೇ ಇಲ್ಲಿ ಮುಖ್ಯ ಕಾರಣವಾಗುತ್ತಿದೆ. ಈ ಕಾರಣದಿಂದಲೇ ಎಷ್ಟು ಬುದ್ಧಿವಂತನಾದರೂ ಜ್ಞಾನವನ್ನು ಕಬ್ಜಾ ಮಾಡಿರುವವರ ಕೈಯಲ್ಲಿ ಮೋಸ ಹೋಗಿರುವೆನೆಂದು ತಿಳಿಯದೆ ಹೋಗುತ್ತಿದ್ದಾನೆ.

ದೇವರು ಭಗವದ್ಗೀತೆಯಲ್ಲಿ ಹೇಳಿದ ಜ್ಞಾನವು ಪ್ರಜೆಗಳಿಗೆ ತಿಳಿದಿಲ್ಲ. ಅದು ತಿಳಿಯಬೇಕೆಂದರೆ ಇತರ ಪಂಡಿತರು ಹೇಳಿರುವುದೇ ಕೇಳಬೇಕು. ಅವರು ಹೇಳಿರುವುದನ್ನೇ ನಂಬಬೇಕು. ಇಲ್ಲಿಯೇ ಮೋಸಕ್ಕೆ ಅವಕಾಶ ಬರುತ್ತಿದೆ. ಭಗವದ್ಗೀತೆಯಲ್ಲಿ ಜ್ಞಾನವನ್ನು ಹೇಳಿದರೆ ಅಲ್ಲಿ ಕೂಡಾ ಜ್ಞಾನದಲ್ಲಿ ಅನುಭವವಿರುವವರು ತಮ್ಮ ಮಾತನ್ನು ಕೇಳದೆಹೋಗಬಹುದೆಂದು, ಪುನಃ ಪ್ರಶ್ನಿಸಬಹುದೆಂದು, ಆಗ ಇತರರು ಮೋಸಹೋಗದಂತಿರುವುದಕ್ಕೆ ಅವಕಾಶವಿರುತ್ತದೆಂದು ಭಗವದ್ಗೀತೆಯೇ ಮನುಷ್ಯನಿಗೆ ಮುಖ್ಯವಲ್ಲವೆಂದು, ಭಗವದ್ಗೀತೆಗಿಂತಲೂ ಮೊದಲು ಹುಟ್ಟಿರುವ ವೇದಗಳೇ ಮುಖ್ಯವಾದವು ಎಂದು ಕಬ್ಜಾದಾರರು ಎಲ್ಲಾ ಜ್ಞಾನವೇ ಆಗಿರುವ ಭಗವದ್ಗೀತೆಯನ್ನು ಪಕ್ಕದಲ್ಲಿಟ್ಟು, ಜ್ಞಾನವು ಅಜ್ಞಾನವು ಎಲ್ಲಾ ಬೆರೆತಿರುವ ವೇದಗಳನ್ನೇ ಮುಖ್ಯವಾಗಿ ಹೇಳುತ್ತಿದ್ದಾರೆ. ಭಗವದ್ಗೀತೆ ಎಲ್ಲಾಕಡೆ ದೊರೆಯುತ್ತದೆ. ಆದರೆ ವೇದಗಳು ಎಲ್ಲಿರುತ್ತವೋ ಯಾರೂ ನೋಡಿಲ್ಲ. ಎಲ್ಲರಿಗೂ ಪರಿಚಯವಿಲ್ಲದೆ ಇರುವುದರಿಂದ ವೇದಗಳು ಕೇವಲ ಎಲ್ಲರಿಗೂ ತಿಳಿಯದ ಸಂಸ್ಕೃತ ಭಾಷೆಯಲ್ಲಿ ಇರುವುದರಿಂದ ಅವುಗಳ ವಿವರವು ಎಲ್ಲರಿಗೂ ತಿಳಿಯದೆ ಹೋಗಿರುವುದರಿಂದ ಜ್ಞಾನ ಕಬ್ಜಾದಾರರು

ಹಿಂದುಗಳಿಗೆ ವೇದಗಳೇ ಮುಖ್ಯವಾದ ಪ್ರಮಾಣ ಗ್ರಂಥಗಳೆಂದು ಹೇಳುತ್ತಿದ್ದಾರೆ. ಆದ್ದರಿಂದ ಹಿಂದೂಗಳಲ್ಲಿ ಬಹಳಜನ ಹಿಂದೂಗಳ ಗ್ರಂಥಗಳು ವೇದಗಳೆಂದೇ ಹೇಳುತ್ತಿರುತ್ತಾರೆ.

ವೇದಗಳು ಭಗವದ್ಗೀತೆಗಿಂತಲೂ ಮೊದಲು ವ್ಯಾಸನಿಂದ ಬರೆಯಲ್ಪಟ್ಟಿವೆ. ದ್ವಾಪರ ಯುಗದಲ್ಲಿ ತಯಾರಾದ ನಾಲ್ಕು ವೇದಗಳನ್ನು ಪ್ರಚಾರ ಮಾಡುವುದಕ್ಕೆ ಹದಿನೆಂಟು ಪುರಾಣಗಳನ್ನು ವ್ಯಾಸನೇ ಬರೆದಿದ್ದಾನೆ. ಆಗಾಗಲೇ ದೈವಜ್ಞಾನ ಕ್ಷೀಣಿಸಿರುವಾಗ ವೇದಗಳ, ಪುರಾಣಗಳ ಪ್ರವೇಶದಿಂದ ಜ್ಞಾನವು ಪೂರ್ತಿ ಕಣ್ಮರೆಯಾಗಿ ಧರ್ಮಗಳೆಲ್ಲ ಅಧರ್ಮಗಳಾಗಿ ಬದಲಾಗಿ ಹೋಗಿವೆ. ಆಗ ಧರ್ಮಗಳನ್ನು ತಿರುಗಿ ಪ್ರತಿಷ್ಠಿಸುವುದಕ್ಕೆ ದೇವರು ಭಗವಂತನಾಗಿ ಬರಬೇಕಾಗಿ ಬಂದಿದೆ. ದೇವರು ಧರ್ಮಸಂಸ್ಥಾಪನೆ ಮಾಡುವುದಕ್ಕೆ ಬೋಧಿ ಸಿರುವುದೇ ಭಗವದ್ಗೀತೆ. ಭಗವದ್ಗೀತೆಯಲ್ಲಿ ಸಾಂಖ್ಯಯೋಗವೆಂಬ ಅಧ್ಯಾಯದಲ್ಲಿ 45ನೇ ಶ್ಲೋಕದಲ್ಲಿ **"ತ್ರೈಗುಣ್ಯ ವಿಷಯಾ ವೇದಾ"** ಎಂದು ಮೂರು ಗುಣಗಳ ವಿಷಯಗಳೇ ವೇದಗಳು ಎಂದು ಭಗವಂತನು ಹೇಳುವುದು ನಡೆದಿದೆ. ಅಷ್ಟೇ ಅಲ್ಲದೆ ಭಗವದ್ಗೀತೆಯಲ್ಲಿಯೇ ವಿಜ್ಞಾನಯೋಗವೆಂಬ ಅಧ್ಯಾಯದಲ್ಲಿ 14ನೇ ಶ್ಲೋಕದಲ್ಲಿ **"ದೈವೀಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ"** ಎಂದು ಸಹ ಹೇಳಿದ್ದಾನೆ. ಇದರ ಭಾವ ಪ್ರಕಾರ **"ದೈವ ನಿರ್ಮಿತವಾದ ಗುಣಗಳಿಂದ ಕೂಡಿಕೊಂಡಿರುವ ಮಾಯೆಯನ್ನು ಜಯಿಸುವುದು ದುಸ್ಸಾಧ್ಯ"** ಎಂದು ಹೇಳಲ್ಪಟ್ಟಿದೆ. ಆದರೆ ಈದಿನ ವೇದಗಳು ಮುಖ್ಯವೆಂದು, ವೇದಗಳು ಸನಾತನವಾದವುಗಳೆಂದು, ವೇದಗಳನ್ನು ಎಲ್ಲರೂ ಪಾರಾಯಣ ಮಾಡಬೇಕೆಂದು ದೇವರ ಮಾತಿಗೆ ವಿರುದ್ಧವಾಗಿ ಜ್ಞಾನ ಕಬ್ಜಾದಾರರು ಹೇಳುವುದು ನಡೆಯುತ್ತಿದೆ. ಸಾಧಾರಣ ಪ್ರಜೆಗಳು ಅವರ ಮಾತನ್ನೇ ನಂಬಿ ಮೋಸಹೋಗುತ್ತಿದ್ದಾರೆಂದು, ವೇದಗಳಿಂದಲೇ ದೇವರು ತಿಳಿದುಬರುವನೆಂದು ಹೇಳಿ ಮೋಸ ಮಾಡುತ್ತಿರುವ ರೆಂದು, ದೇವರು ಪ್ರಜೆಗಳ ಕಣ್ತೆರೆಸುವುದಕ್ಕಾಗಿ ಜ್ಞಾನವಿಷಯದಲ್ಲಿ ಮೋಸಹೋ ಗದೆ ಇರುವುದಕ್ಕೆ ವಿಶ್ವರೂಪ ಸಂದರ್ಶನ ಯೋಗವೆಂಬ ಅಧ್ಯಾಯದಲ್ಲಿ

48ನೇ ಶ್ಲೋಕದಲ್ಲಿ ಮತ್ತು 53ನೇ ಶ್ಲೋಕದಲ್ಲಿ ವೇದಪಾರಾಯಣದಿಂದ, ಯಜ್ಞಗಳು ಮಾಡುವುದರಿಂದ, ದಾನಗಳಿಂದ, ತಪಸ್ಸುಗಳಿಂದ ದೇವರು ತಿಳಿದುಬರುವುದಿಲ್ಲವೆಂದು ಹೇಳುವುದು ನಡೆದಿದೆ. ಐದುಸಾವಿರ ವರ್ಷಗಳ ಕೆಳಗೇ ಈ ಮಾತು ಹೇಳಿದರೂ ಇಂದಿನವರೆಗೂ ಮನುಷ್ಯ ಮೋಸ ಹೋಗುತ್ತಲೇ ಇದ್ದಾನೆ. ಯಜ್ಞ ಯಾಗಾದಿಗಳನ್ನು ಮಾಡುತ್ತಾ, ವೇದಗಳನ್ನು ಪಾರಾಯಣ ಮಾಡುತ್ತಲೇ ಇದ್ದಾನೆ. ಪ್ರಜೆಗಳೆಲ್ಲರೂ ಅದೇ ದೊಡ್ಡ ಕಾರ್ಯವೆಂದು ಅಂದುಕೊಳ್ಳುತ್ತಿದ್ದಾರೆ. ದೇವರು ಭಗವದ್ಗೀತೆಯಲ್ಲಿ ವೇದಗಳನ್ನು ಕುರಿತು ಅವು ದೇವರನ್ನು ತಿಳಿದುಕೊಳ್ಳುವುದಕ್ಕಾಗಲಿ, ದೈವಾರಧನೆಯಲ್ಲಾಗಲಿ ಕೆಲಸಕ್ಕೆ ಬರುವುದಿಲ್ಲವೆಂದು ಹೇಳಿದರೂ, ಕಬ್ಜಾದಾರರು ವೇದಗಳೇ ಮುಖ್ಯವೆಂದು ಹೇಳುತ್ತಿದ್ದಾರೆ. ಇದನ್ನನುಸರಿಸಿ ನೋಡಿದರೆ ಜ್ಞಾನವಿಷಯದಲ್ಲಿ ಮೋಸ ಯಾವ ಹಂತದಲ್ಲಿ ಇರುವುದೋ, ಪ್ರಜೆಗಳು ಎಷ್ಟು ಮೋಸಹೋಗುತ್ತಿದ್ದಾರೋ ಅರ್ಥವಾಗಿದೆ.

ಪ್ರಪಂಚ ವಿಷಯಗಳಲ್ಲಿ ಎಷ್ಟೋ ಬುದ್ಧಿವಂತನಾದ ಮನುಷ್ಯ, ಪ್ರಪಂಚ ವಿಷಯಗಳಲ್ಲಿ ಮೋಸಹೋದರೂ, ತಾನು ಮೋಸಹೋಗಿರುವೆನೆಂದು ಬೇಗನೇ ಗ್ರಹಿಸಿಕೊಳ್ಳುತ್ತಾನೆ. ಆದರೇ ಜ್ಞಾನವಿಷಯದಲ್ಲಿ ಮೋಸಹೋದ ಮನುಷ್ಯ ತಾನು ಮೋಸಹೋಗಿರುವೆನೆಂದು, ಮೋಸಹೋಗುತ್ತಿರುವೆನೆಂದು ಎಷ್ಟುಮಾತ್ರ ಗ್ರಹಿಸದೆ ಇದ್ದಾನೆ. ಸೃಷ್ಠಿ ಆದಿಯಲ್ಲಿಯೇ ಇಂದೂ ಧರ್ಮಗಳನ್ನು ದೇವರು ಹೇಳಿದ್ದಾನೆ. ಯಾವ ಮತವಿಲ್ಲದ ಕಾಲದಿಂದಲೂ ಇಂದೂ ಧರ್ಮಗಳು ಇವೆ. ಮನುಷ್ಯ ಕಾಲಕ್ರಮೇಣ ಆಧ್ಯಾತ್ಮಿಕ ವಿದ್ಯೆಯಲ್ಲಿ ಮೋಸಹೋಗುತ್ತಾ ಬಂದಿರುವುದರಿಂದ ಇಂದೂ ಧರ್ಮವು ಸ್ವಲ್ಪ ಹಿಂದೂಮತವಾಗಿ ಹೋಗಿದೆ. ಹಾಗೆ ಇಂದೂ ಧರ್ಮಗಳು ಕ್ಷೀಣಿಸಬಾರದೆಂಬ ಉದ್ದೇಶದಿಂದ ದೇವರು ಭಗವಂತನಾಗಿ ಬಂದು, ದ್ವಾಪರಯುಗ ಕೊನೆಯಲ್ಲಿ ಮತ್ತು ಕಲಿಯುಗ ಆರಂಭದಲ್ಲಿಯೇ ಭಗವದ್ಗೀತೆಯನ್ನು ಹೇಳಿಹೋಗಿದ್ದಾನೆ. ಹಾಗೆ ಹೇಳಿದ ಭಗವದ್ಗೀತಾ ಜ್ಞಾನ ಕಬ್ಜಾದಾರರಿಗೆ ದೊಡ್ಡ ಆತಂಕವಾಗಿ ನಿಂತಿದೆ. ಆದರೆ

ಕಬ್ಜಾದಾರರು ಭಗವದ್ಗೀತೆಯನ್ನು ಅಲ್ಲಗಳೆದು ವೇದಗಳನ್ನು ಮುಂದೆ ತಂದಿದ್ದಾರೆ. ಆದರೂ ಭಗವದ್ಗೀತೆಯನ್ನು ನೋಡುವವರು ಕೆಲವರು ಇರುವುದರಿಂದ ಅದು ಕೂಡಾ ಅವರಿಗೆ ನುಂಗಲಾರದಂತಿದೆ. ಆದ್ದರಿಂದ ಸಂಸ್ಕೃತದಲ್ಲಿನ ಭಗವದ್ಗೀತೆಗೆ ವಿವರವನ್ನು ನಾವು ಹೊರತು ಇತರರು ಹೇಳಲಾರರು ಎಂದು ಪ್ರಕಟಿಸಿಕೊಂಡು, ಗೀತೆಯಲ್ಲಿನ ಶ್ಲೋಕಗಳಿಗೆ ತಪ್ಪು ಭಾವಗಳನ್ನು ತಿಳಿಸಿ, ಭಗವದ್ಗೀತೆ ಒಂದರ ಜ್ಞಾನವನ್ನು ಸಹ ಆಕ್ರಮಿಸಿಕೊಂಡಿದ್ದಾರೆ. ಪ್ರಜೆಗಳನ್ನು ಭಗವದ್ಗೀತೆ ಕುರಿತು ತಪ್ಪು ದಾರಿ ಹಿಡಿಸಿ ಇದು ಹೀಗೇ ಇರಬೇಕೆಂದು ಹೇಳಿದ್ದಾರೆ. ವಿಗ್ರಹಾರಾಧನೆ ಯಿಂದ ಪ್ರಪಂಚ ಕೋರಿಕೆಗಳು ಹೊರತು ಜ್ಞಾನ ತಿಳಿದುಬರುವುದಿಲ್ಲವೆಂದು ದೇವರು ಭಗವದ್ಗೀತೆ ವಿಜ್ಞಾನ ಯೋಗದಲ್ಲಿ 20, 21, 22, 23 ಶ್ಲೋಕಗಳಲ್ಲಿ ಹೇಳಿದರೇ, ವಿಗ್ರಹಾರಾಧನೆ ಮಾಡದವನು ಹಿಂದೂವೇ ಅಲ್ಲವೆಂದು, ದೇವತೆಗಳನ್ನು ಪೂಜಿಸುವುದು ಹಿಂದೂಗಳ ಸನಾತನ ಧರ್ಮವೆಂದು ಬೋಧಿಸಿದ್ದಾರೆ. ಈ ವಿಧವಾಗಿ ಪ್ರತ್ಯಕ್ಷವಾಗಿ ಭಗವದ್ಗೀತೆಗೆ ವಿರುದ್ಧವಾಗಿ ಜ್ಞಾನವನ್ನು ಕಬ್ಜಾ ಮಾಡಿದವರು ಬೋಧಿಸಿದರೂ ಅದೇ ಸತ್ಯವೆಂದು ಪ್ರಜೆಗಳು ನಂಬುತ್ತಿದ್ದಾರೆ. ಭಗವದ್ಗೀತೆಯಲ್ಲಿ ವಿಜ್ಞಾನಯೋಗದಲ್ಲಿ ದೇವರು ಹೇಳಿದ ಮಾತನ್ನು ಗಾಳಿಗೆ ಬಿಟ್ಟಿದ್ದಾರೆ.

ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ 15ನೇ ಸುರಾ 29, 30 ಆಯತ್‌ಗಳಲ್ಲಿ ದೇವರ ಪ್ರತಿನಿಧಿಯಾಗಿ ಬಂದವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿರೆಂದು ಹೇಳಿದ್ದರೂ, ಆ ಮತದಲ್ಲಿನ ಜ್ಞಾನ ಕಬ್ಜಾದಾರರು ಖುರಾನ್‌ನಲ್ಲಿನ ದೇವರ ಮಾತಿಗೆ ವಿರುದ್ಧವಾಗಿ ಯಾರಿಗೂ ಮುಗಿಯಬಾರದೆಂದೂ, ಹಾಗೆ ಮುಗಿದರೆ ಅಜ್ಞಾನವಾಗುತ್ತದೆಂದೂ, ದೇವರು ಒಪ್ಪಿಕೊಳ್ಳುವುದಿಲ್ಲವೆಂದು ಹೇಳಿ ಬರೆದಿದ್ದಾರೆ. ದೇವರು ಹೇಳಿದ ಮಾತನ್ನು ದೇವರೇ ಒಪ್ಪಿಕೊಳ್ಳುವುದಿಲ್ಲವೆಂದು ಹೇಳಿದಹಾಗೆ, ಹಿಂದೂಮತದಲ್ಲಿ ಸಹ ಭಗವದ್ಗೀತೆಯಲ್ಲಿ ಹೇಳಿದ ದೇವರ ಮಾತಿಗೆ ವಿರುದ್ಧವಾಗಿ ವಿಗ್ರಹಾರಾಧನೆ ಪ್ರತಿ ಹಿಂದುವು ಮಾಡಬೇಕೆಂದು, ವಿಗ್ರಹಾರಾಧನೆ ಮಾಡದಿರುವವನು ಹಿಂದೂವೇ ಅಲ್ಲವೆಂದು ಹಿಂದೂಗಳಲ್ಲಿ

ಹಿರಿಯರೆನ್ನುವವರು ಬೋಧಿಸುತ್ತಿದ್ದಾರೆ. ದೇವರ ಜ್ಞಾನವು ದೇವರಿಗೆ ಹೊರತು ಮನುಷ್ಯರಿಗೆ ತಿಳಿದಿಲ್ಲವೆಂದು ದೇವರು ತನ್ನ ಗ್ರಂಥಗಳಲ್ಲಿ ಹೇಳಿದರೂ, ಮನುಷ್ಯರು ದೇವರು ಹೇಳಿದ ಗ್ರಂಥಗಳಲ್ಲಿನ ವಿಷಯಗಳನ್ನು ಕೂಡಾ ಖಾತ್ರಿ ಮಾಡದೆ, ದೇವರ ಮಾತುಗಳಿಗೆ ವಿರುದ್ಧವಾಗಿ ಬೋಧಿಸುತ್ತಾ, ದೇವರ ಜ್ಞಾನವನ್ನು ಕಬ್ಜಾಮಾಡಿ, ತಾನು ಹೇಳಿದಂತೆಯೇ ದೇವರ ಜ್ಞಾನವಿರಬೇಕೆಂದು ಹೇಳುತ್ತಿದ್ದಾರೆ. ಹಿಂದೂ ಸಮಾಜಕ್ಕೆ ಭಗವದ್ಗೀತೆ ಗ್ರಂಥವನ್ನು ಕೊಟ್ಟು ಇದರ ಪ್ರಕಾರ ನಡೆದುಕೊಳ್ಳಿರೆಂದರೆ, ಪಂಡಿತರೆಂದು ಕರೆಯಲ್ಪಡುವವರು ಅದಕ್ಕೆ ವಿರುದ್ಧವಾಗಿ ಪ್ರಜೆಗಳಿಗೆ ಬೋಧಿಸುತ್ತಿದ್ದಾರೆ.

ಭಗವದ್ಗೀತೆಯಲ್ಲಿ ತಾನು ಪುರುಷನೆಂದು, ತನಗೆ ಸತಿಯಾಗಿ ಪ್ರಕೃತಿ ಇರುವುದೆಂದು ಗುಣತ್ರಯ ವಿಭಾಗಯೋಗದಲ್ಲಿ ಮೊದಲಿನಲ್ಲಿಯೇ ದೇವರು ಹೇಳಿದ್ದಾನೆ. ನಂತರ ಬಂದ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಪುರುಷನಾದ ತಾನು ಮೂವರಾಗಿ ವಿಭಜಿಸಲ್ಪಟ್ಟಿದ್ದೇನೆಂದು ತನಗಿಂತಲೂ ಬೇರೆಯಾಗಿರುವ ಇಬ್ಬರು ಪುರುಷರು ಒಬ್ಬರು ಕ್ಷರನು ಮತ್ತೊಬ್ಬನು ಅಕ್ಷರನೆಂದು ಸಹ ಹೇಳಿದ್ದಾನೆ. ಆದರೆ ಆ ವಿಷಯವನ್ನು ಎಷ್ಟು ಮಾತ್ರ ಹೊರಕ್ಕೆ ತಿಳಿಯದಂತೆ ಪಂಡಿತರೆಂದು ಕರೆಯಲ್ಪಡುವ ಜ್ಞಾನ ಕಬ್ಜಾದಾರರು ಮಾಡಿದ್ದಾರೆ. ಒಂದು ಪ್ರಕೃತಿಯೆಂದು ಪ್ರಕೃತಿಯೇ ಕ್ಷರನೆಂದು, ಸ್ತ್ರೀತತ್ವವನ್ನು ಹೊಂದಿರುವ ಪ್ರಕೃತಿಯನ್ನು ಪುರುಷನಾಗಿ ಹೇಳುವುದು ನಡೆದಿದೆ. ದೇವರು ಕ್ಷರನು, ಅಕ್ಷರನು, ಪುರುಷೋತ್ತಮನೆಂದು ತನ್ನನ್ನು ಮೂವರು ಪುರುಷರನ್ನಾಗಿ ಹೇಳಿದರೇ ಅದರಲ್ಲಿ ಅಕ್ಷರನನ್ನು ಪ್ರಕೃತಿಯೆಂದು ಹೇಳಿ, ಪ್ರಜೆಗಳನ್ನು ಮೋಸಮಾಡಿ ದೈವತ್ವ ಪ್ರಜೆಗಳಿಗೆ ಅರ್ಥವಾಗದಂತೆ ಮಾಡಿದ್ದಾರೆ. ಒಂದುಕಡೆ ಪ್ರಜೆಗಳಿಗೆ ಒಳ್ಳೆಯದು ಹೇಳಿದಹಾಗೆಯೇ ನಟಿಸುತ್ತಾ, ತಮ್ಮ ಅಧಿಕಾರ ಹಿರೆತನಕ್ಕಾಗಿ ದೈವಜ್ಞಾನವು ಯಾರಿಗೂ ಅರ್ಥವಾಗದಂತೆ ಮಾಡಿ, ಪ್ರಜೆಗಳನ್ನು ಮೋಸ ಮಾಡಿದ್ದಾರೆ. ಪ್ರಪಂಚದಲ್ಲಿನ ಆಧ್ಯಾತ್ಮಿಕ ಜ್ಞಾನದಲ್ಲಿ ಮುಖ್ಯವಾದ ವಿಷಯ ಮೂವರು ಪುರುಷರ ಜ್ಞಾನ. ಆದರೇ ಅದನ್ನು ಯಾವ ಭಗವದ್ಗೀತೆಯಲ್ಲಿಯೂ ತಿಳಿಯದಂತೆ

ಮಾಡಿದ್ದಾರೆ. ನಾವು ಬರೆದಿರುವ **"ತ್ರೈತ ಸಿದ್ಧಾಂತ ಭಗವದ್ಗೀತೆ"**ಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ 16, 17 ಶ್ಲೋಕಗಳಲ್ಲಿ ಹೇಳಿದ ಮೂವರು ಪುರುಷರನ್ನು ವಿವರಿಸಿ ಹೇಳಿದರೆ, ನಮ್ಮನ್ನು ಕ್ರೈಸ್ತವ ಮತ ಪ್ರಚಾರಕನೆಂದು ಅನ್ನುವುದು ನಡೆದಿದೆ. ತ್ರೈತ ಸಿದ್ಧಾಂತವನ್ನು ಉಪಯೋಗಿಸಿ ಅದ್ವೈತ, ದ್ವೈತ ಸಿದ್ಧಾಂತಗಳನ್ನು ಅತಿಕ್ರಮಿಸಿ ನಾವು ಭಗವದ್ಗೀತೆಯನ್ನು ಬರೆದರೇ, ಜ್ಞಾನದಲ್ಲಿ ಎಲ್ಲರನ್ನು ಮೋಸಮಾಡಿದವರು ನಮ್ಮನ್ನು ಭಗವದ್ಗೀತೆಯ ಮುಸುಗಿನಲ್ಲಿ ಬೈಬಲ್‌ನ್ನು ಪ್ರಚಾರ ಮಾಡುತ್ತಿದ್ದಾರೆಂದು ಪೂರ್ತಿ ಅನ್ಯಾಯವಾಗಿ ಮಾತನಾಡಿ, ತಮ್ಮ ಹಿರೆತನವನ್ನು ಕಾಪಾಡಿಕೊಳ್ಳಬೇಕೆಂದು ನೋಡಿದರು. ಆದರೂ ಅವರ ಪ್ರಯತ್ನ ನೆರವೇರಲಿಲ್ಲ. **ತ್ರೈತ ಸಿದ್ಧಾಂತ ಭಗವದ್ಗೀತೆಗಿಂತಲೂ ಮೀರಿದ ಜ್ಞಾನವು ಇಲ್ಲವೆಂದು, ಆ ಭಗವದ್ಗೀತೆಗಿಂತಲೂ ಮೀರಿದ ಭಗವದ್ಗೀತೆ ಇಲ್ಲವೆಂದು ಪ್ರಜೆಗಳಿಗೆ ತಿಳಿದು ಹೋಗಿದೆ.**

ನಾವು ಎಷ್ಟೋ ಕಷ್ಟಪಟ್ಟು ಭಗವದ್ಗೀತೆ ಜ್ಞಾನವನ್ನು ಕಬ್ಜಾದಾರರಿಂದ ಬಿಡಿಸಬೇಕೆಂಬ ಪ್ರಯತ್ನ ಮಾಡುತ್ತಿದ್ದೇವೆ. ಇಲ್ಲಿ ಒಂದು ಹಿಂದುಮತದಲ್ಲಿಯೇ ಅಲ್ಲದೆ ಉಳಿದ ಎರಡು ಮತಗಳಾಗಿ ಕರೆಯಲ್ಪಡುತ್ತಿರುವ ಕ್ರೈಸ್ತವದಲ್ಲಿ ಮತ್ತು ಮುಸ್ಲಿಮ್ ಮತದಲ್ಲಿ ಆಯಾ ಮತಗ್ರಂಥಗಳಲ್ಲಿನ ವಾಸ್ತವ ಜ್ಞಾನವನ್ನು ಮುಚ್ಚಿಟ್ಟು ಹೇಳುವುದು ನಡೆಯುತ್ತಿದೆ. ಇದನ್ನನುಸರಿಸಿ ದೈವಗ್ರಂಥಗಳಾದ ಮೂರು ಗ್ರಂಥಗಳಲ್ಲಿನ ಜ್ಞಾನ ಕಬ್ಜಾ ಮಾಡಲಾಗಿರುವುದೆಂದು ಅರ್ಥವಾಗುತ್ತಿದೆ. ಇಲ್ಲಿ ನನ್ನನ್ನು ಕೆಲವರು ಕೆಲವು ಪ್ರಶ್ನೆಗಳನ್ನು ಕೇಳಬಹುದು. ನೀನು ಇಂದೂ (ಹಿಂದು) ಅಲ್ಲವೇ! ಹಾಗಿರುವಾಗ ಭಗವದ್ಗೀತೆಯನ್ನು ಕುರಿತು ಮಾತನಾಡಬಹುದು ಆದರೆ, ಉಳಿದ ಎರಡು ಗ್ರಂಥಗಳ ವಿಷಯವನ್ನು ಕುರಿತು ನೀವು ಏಕೆ ಮಾತನಾಡುತ್ತಿದ್ದೀರೆಂದು ಪ್ರಶ್ನಿಸಬಹುದು. ಅವರ ಗ್ರಂಥಗಳಲ್ಲಿನ ಜ್ಞಾನ ಕಬ್ಜಾ ಆದರೂ ನಿಮಗೆ ಏನು ಸಂಬಂಧವಿಲ್ಲ ಅಲ್ಲವೇ! ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನವು ಈ ವಿಧವಾಗಿದೆ. ಸೃಷ್ಟಿ ಎಲ್ಲದಕ್ಕೂ ದೇವರು ಒಬ್ಬನೇ ಇರುವನು. ಇಬ್ಬರು ಅಥವಾ ಮೂವರು ದೇವರುಗಳಿದ್ದಾರೆಂದು

ಯಾವ ದೈವಗ್ರಂಥದಲ್ಲಿಯೂ ಹೇಳಲಿಲ್ಲ. ದೈವ ಗ್ರಂಥಗಳು ಮೂರು ಭಾಗಗಳಾಗಿದ್ದರೂ, ಉಳಿದ ಎರಡು ಗ್ರಂಥಗಳು ಮೊದಲನೆಯದರಲ್ಲಿನ ಭಾಗಗಳೇ ಹೊರತು ಇತರ ಅಲ್ಲವೆಂದು ಆ ಉಳಿದ ಎರಡು ಗ್ರಂಥಗಳಲ್ಲಿಯೇ ಬರೆಯಲಾಗಿದೆ. ಅಂತಿಮ ದೈವ ಗ್ರಂಥದಲ್ಲಿ 5ನೇ ಸುರಾ 46, 48, 68 ಆಯತ್‌ಗಳನ್ನು (ವಾಕ್ಯಗಳನ್ನು), 62ನೇ ಸುರಾ 5ನೇ ಆಯತ್‌ನ್ನು ನೋಡಿದವರು ಎರಡು ಗ್ರಂಥಗಳು ಭಗವದ್ಗೀತೆಯಲ್ಲಿನ ಭಾಗಗಳೇ ಎಂದು ಹೇಳದೆ ತಪ್ಪುವುದಿಲ್ಲ. ಸರ್ವ ಸಾಧಾರಣವಾಗಿ ಮೊದಲು ಒಂದು ಹೆಸರಿದ್ದು ನಂತರ ಭಾಗಗಳಾಗಿ ಹೇಳಲ್ಪಟ್ಟಿರುವುದು ಯಾವುದಾದರೂ ಮೊದಲನೆಯದರ ಭಾಗಗಳೇ ಎಂದು ಹೇಳದೆ ತಪ್ಪಲ್ಲ ಅಲ್ಲವೇ! ಉದಾಹರಣೆಗೆ ಭಾರತವು ಎನ್ನುವ ಗ್ರಂಥವು ಮೂವರು ಕವಿಗಳಿಂದ ಮೂರುಭಾಗಗಳಾಗಿ ತೆಲುಗಿನಲ್ಲಿ ಬರೆಯಲ್ಪಟ್ಟಿದೆ. ಆಗ ಮೂವರು ಕವಿಗಳು ಬರೆದರೂ, ಮೂರು ಕಾಲಗಳಲ್ಲಿ ಬರೆದರೂ, ಮೂರು ಬೇರೆಬೇರೆ ಭಾಗಗಳಾಗಿ ಬರೆದರೂ, ಅವುಗಳೆಲ್ಲವನ್ನು ಸೇರಿಸಿ ಭಾರತ ಎಂದೇ ಹೇಳುತ್ತಿದ್ದೇವೆ. ನನ್ನಯ್ಯ, ತಿಕ್ಕನ, ಎರ್ರಾಪ್ರಗಡ ಎಂಬ ಮೂವರು ಕವಿಗಳು ಬೇರೆಬೇರೆ ಕಾಲಗಳಲ್ಲಿ ಒಬ್ಬರು ಮೃತಪಟ್ಟ ನಂತರ ಮತ್ತೊಬ್ಬರು ಬರೆಯಲಾಗಿದೆ. ಹಾಗೆ ಬರೆದಿರುವ ಭಾರತವನ್ನು ನನ್ನಯ್ಯ ಕವಿ ಬರೆದಿರುವುದನ್ನು ಮೊದಲ ಭಾರತವೆಂದು, ತಿಕ್ಕನ ಬರೆದಿರುವುದನ್ನು ಎರಡನೆಯ ಭಾರತವೆಂದು ಅಥವಾ ಮಧ್ಯ ಭಾರತವೆಂದು, ಎರ್ರಾಪ್ರಗಡ ಬರೆದಿರುವುದನ್ನು ಮೂರನೆಯ ಭಾರತವೆಂದು ಅಥವಾ ಅಂತಿಮ ಭಾರತವೆಂದು ಹೆಸರಿಟ್ಟರೂ ಅವು ಮೂರೂ ಒಂದೇ ಭಾರತವಾಗುತ್ತದೆ ಅಲ್ಲವೇ! ಅಂತಿಮ ಭಾರತವಿರುವಾಗ ತಪ್ಪದೆ ಪ್ರಥಮ ಭಾರತವಿರುತ್ತದೆ ಅಲ್ಲವೇ! ಅಂತಿಮ ಭಾರತವು ಪ್ರಥಮ ಭಾರತಕ್ಕೆ ಸೇರಿರುವುದೇ ಅಲ್ಲವೇ! ಹಾಗೆಯೇ ಅಂತಿಮ ದೈವಗ್ರಂಥವೆಂದು ಹೆಸರು ಇಟ್ಟಾಗ ಅದಕ್ಕು ಮೊದಲು ಪ್ರಥಮ ದೈವ ಗ್ರಂಥವು ತಪ್ಪದೆ ಇರುತ್ತದೆ. ದೈವಗ್ರಂಥವು ಎಷ್ಟು ಭಾಗಗಳಾಗಿದ್ದರೂ ಆ ಭಾಗಗಳೆಲ್ಲಾ ಒಂದೇ ದೈವಗ್ರಂಥ ದೊಳಗಿವನೇ ಎಂದು ಹೇಳಬಹುದು.

ಭಾರತವನ್ನು ಬರೆದಿರುವರು ಮೂವರು ಕವಿಗಳಾದರೂ ಬರೆಯಲ್ಪಟ್ಟಿರುವುದು ಒಂದೇ ಭಾರತವೆಂದು, ಭಾರತವು ಮೂರು ಭಾಗಗಳಾಗಿ, ಮೂರು ಕಾಲಗಳಲ್ಲಿಯೂ, ಮೂವರು ಬೇರೆಬೇರೆ ಕವಿಗಳು ಬರೆದರೂ ಅದೆಲ್ಲವೂ ಒಂದೇ ಭಾರತವೆಂದು ಹೇಳಲ್ಪಟ್ಟಿರುವಹಾಗೆ, ದೈವಗ್ರಂಥವನ್ನು ಮೂವರು ಬೇರೆಬೇರೆ ಪ್ರವಕ್ತರು ಹೇಳಿದರೂ, ಪ್ರಥಮ, ಮಧ್ಯ, ಅಂತಿಮ ಎಂದು ಮೂರು ಬೇರೆಬೇರೆ ಭಾಗಗಳಾಗಿದ್ದರೂ, ಮೂರು ಬೇರೆಬೇರೆ ಕಾಲಗಳಲ್ಲಿ ಬರೆಯಲಾಗಿದ್ದರೂ, ಕೊನೆಗೆ ಅದನ್ನು ಒಂದೇ ದೈವಗ್ರಂಥವಾಗಿ ಹೇಳಬಹುದು. ಹೇಗಾದರೆ ಮೂರು ಭಾಗಗಳಾಗಿರುವ ಭಾರತವನ್ನು ಒಂದೇ ಭಾರತವಾಗಿ ಹೇಳುತ್ತಿದ್ದೇವೋ, ಹಾಗೆಯೇ ಮೂರು ಭಾಗಗಳಾಗಿರುವ ದೈವ ಗ್ರಂಥವನ್ನು ಒಂದೇ ದೈವಗ್ರಂಥವಾಗಿ ಹೇಳಬಹುದು. ವಾಸ್ತವವಾಗಿ ಇರುವ ಸತ್ಯವು ಕೂಡಾ ಅಷ್ಟೇ. ಒಂದೇ ಪಾಂಡವರ ಸಮಾಚಾರವು ಭಾರತವೊಂದರ ಮೂರು ರಚನೆಗಳಲ್ಲಿರುವಹಾಗೆ, ಒಂದೇ ದೇವರ ಸಮಾಚಾರವು ದೈವ ಗ್ರಂಥವೊಂದರ ಮೂರು ರಚನೆಗಳಲ್ಲಿದೆ. ಹಾಗಿರುವಾಗ ಪ್ರಥಮ ದೈವಗ್ರಂಥವಾದ ಭಗವದ್ಗೀತೆ ಹಿಂದುಗಳದೆಂದು, ಅಂತಿಮದೈವ ಗ್ರಂಥವಾದ ಖುರಾನ್ ಮುಸ್ಲಿಮ್‌ರದೆಂದು ಅಂದುಕೊಳ್ಳುವುದು ಅಜ್ಞಾನವಾಗುವುದು. ಭಗವದ್ಗೀತೆ, ಬೈಬಲ್, ಖುರಾನ್ ಎಂಬ ಮೂರು ಹೆಸರುಗಳೊಂದಿಗೆ ಇರುವ ದೈವಗ್ರಂಥವು ಒಂದೇಯಾಗಿರುವುದರಿಂದ, ಮೂರು ಗ್ರಂಥಗಳಲ್ಲಿ ಒಂದೇ ದೇವರ ಜ್ಞಾನವಿರುವುದರಿಂದ, ಮೂರು ಗ್ರಂಥಗಳು ಸರ್ವ ಮಾನವರಿಗೂ ಸಂಬಂಧಿಸಿರುವವೇ ಆಗಿರುವುದರಿಂದ ಭಗವದ್ಗೀತೆ ಬೇರೆ, ಖುರಾನ್ ಬೇರೆಯೆಂದು ನಾವು ಅಂದುಕೊಳ್ಳುತ್ತಿಲ್ಲ. ದೈವಗ್ರಂಥದಲ್ಲಿನ ಜ್ಞಾನವು ಮೂರು ಮತಗಳಲ್ಲಿನ ಮತಹಿರಿಯರನ್ನು ಅವರಿಂದ, ಮತ ರಕ್ಷಕರೆನ್ನುವ ಅವರಿಂದ ಕಬ್ಜಾ ಮಾಡಲಾಗಿದೆ. ಮತಕ್ಕು, ದೈವಜ್ಞಾನಕ್ಕು ಯಾವ ಸಂಬಂಧವಿರುವುದಿಲ್ಲ. ಜ್ಞಾನವೆಲ್ಲಾ ಮತಕ್ಕೆ ವಿರುದ್ಧವಾಗಿ ಇರುತ್ತದೆ. ಆದ್ದರಿಂದ ಮತವನ್ನು ಅಭಿವೃದ್ಧಿ ಮಾಡಬೇಕೆಂಬ ಮತಛಾಂದಸರು ಮತಕ್ಕಾಗಿ ಜ್ಞಾನವನ್ನು ಕಬ್ಜಾ ಮಾಡಿ, ಇರುವ ಜ್ಞಾನವನ್ನು ಮುಚ್ಚಿಹಾಕಿ, ತಾವು ಹೇಳಿರುವುದೇ ಜ್ಞಾನವೆಂದು ಅನ್ನುತ್ತಿದ್ದಾರೆ. ದೈವ ಗ್ರಂಥದಲ್ಲಿನ ಜ್ಞಾನವನ್ನು ಶಾಸಿಸಿ, ಈ

ಜ್ಞಾನವು ಹೀಗೆಯೇ ಇರಬೇಕೆಂದು ಹೇಳಿ, ಅದೇ ನಿಜವಾದ ಜ್ಞಾನವೆಂದು ಹೇಳಿ ಪ್ರಜೆಗಳು ತಮ್ಮ ಮಾತನ್ನು ಕೇಳುವಂತೆ ಮಾಡಿಕೊಳ್ಳುತ್ತಿದ್ದಾರೆ. ದೇವರೆಂಬ ಹೆಸರಿನಿಂದ ಮತಜ್ಞಾನವನ್ನು ಬೋಧಿಸುತ್ತಿದ್ದಾರೆ. ಈಗಿರುವ ಪ್ರಪಂಚದಲ್ಲಿನ ಒಟ್ಟು ಜನಸಂಖ್ಯೆ ಜ್ಞಾನ ವಿಷಯದಲ್ಲಿ ಅವರವರ ಮತ ಹಿರಿಯರಿಂದ ತೀವ್ರವಾಗಿ ಮೋಸಹೋಗಿರುವರೆಂದು ಹೇಳಬಹುದು.

ದೈವಜ್ಞಾನ ವಿಷಯದಲ್ಲಿ ಮೋಸಹೋದರೂ ತಾವು ಮೋಸಹೋಗಿದ್ದೇವೆಂಬ ಜ್ಞಾಪಕವು ಯಾರಿಗೂ ಬರಲಿಲ್ಲ. ಪ್ರಪಂಚದಲ್ಲಿ ಎಷ್ಟೋ ದೊಡ್ಡ ಮೇಧಾವಿಗಳಿದ್ದರೂ ಯಾರಿಗೆ ತಕ್ಕಂತೆ ಅವರು ಮೋಸ ಹೋಗಿದ್ದಾರೆ. ಕ್ರೈಸ್ತರಿಗೆ ನೀವು ಮೋಸಹೋಗಿದ್ದೀರೆಂದು ದೇವರೇ ಇಳಿದುಬಂದು ಹೇಳಿದರೂ ಅವರು ಕೇಳುವಹಾಗೆ ಇಲ್ಲ. ಯಾರ ಮಾತು ಕೇಳಬಾರದು, ಯಾರ ಗ್ರಂಥಗಳನ್ನು ಓದಬಾರದು, ಯಾರು ಏನು ಹೇಳಿದರೂ ಅವು ಸಾತಾನ್ ಮಾತುಗಳೇ ಆಗುವುದೆಂದು ಅವರ ದೊಡ್ಡವರು ಹೇಳಿರುವುದರಿಂದ, ಯೇಸು ಪುನಃ ಬಂದು ನಾನು ಹೇಳಿರುವುದು ಈ ಜ್ಞಾನವಲ್ಲವೆಂದು ಹೇಳಿದರೂ, ಆತನ ಮಾತುಗಳನ್ನು ಕೂಡಾ ಸಾತಾನ್ ಮಾತುಗಳೆನ್ನುವವರಿದ್ದಾರೆ. ಹಿಂದೂ ಮತದೊಳಗೆ ಬಂದು ನೋಡಿದರೇ ಧರ್ಮಗಳು ಅಧರ್ಮಗಳಾಗಿ ಬದಲಾದಾಗ ಬಂದು ಧರ್ಮಗಳನ್ನು ತಿಳಿಸುತ್ತೇನೆಂದು ಹೇಳಿ ಭಗವದ್ಗೀತೆಯನ್ನು ಕೃಷ್ಣನು ಬೋಧಿಸಿದರೇ, ಆತನನ್ನು ಭಗವಂತನಾಗಿ ಬಂದವನೆಂದು ತಿಳಿಯದೆ (ಯೋಚಿಸದೆ) ಸಾಧಾರಣ ಮನುಷ್ಯನಿಗಿಂತಲೂ ಹೀನವಾಗಿ ಲೆಕ್ಕಿಸಿ ಜಾರನೆಂದು, ಚೋರನೆಂದು ಅಂದಿದ್ದಾರೆ. ಅಲ್ಲಿಗೆ ನಿಲ್ಲಿಸದೆ ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗವೆಂಬ ಅಧ್ಯಾಯದಲ್ಲಿ 48, 53 ಶ್ಲೋಕಗಳಲ್ಲಿ ಯಾವ ಕೆಲಸಗಳು ಅಧರ್ಮವೆಂದು ಹೇಳಿದ್ದಾನೋ, ಯಾವ ಕೆಲಸಗಳಿಂದ ದೇವರು ತಿಳಿಯಲಾರನೆಂದು ಹೇಳಿದ್ದಾನೋ, ಅವೇ ಕೆಲಸಗಳನ್ನೇ ದೇವರ ಆರಾಧನೆ ಕಾರ್ಯಗಳಾಗಿ ಪ್ರಜೆಗಳನ್ನು ನಂಬಿಸಿ ಮಾಡಿಸುತ್ತಿದ್ದಾರೆ. ಇಂತಹ ದೊಡ್ಡ ಮೋಸಗಳು ಒಂದು ಹಿಂದೂಮತಕ್ಕೇ ಪರಿಮಿತಿ ಯಾಗದೇ ಒಟ್ಟಾರೆ ಮೂರು

ಮತಗಳಲ್ಲಿಯೂ ವ್ಯಾಪಿಸಿ ಹೋಗಿವೆ. ಅಂತಹ ಸಂದರ್ಭದಲ್ಲಿ ಕಣ್ಣ ಎದುರು ನಡೆಯುವ ಮೋಸವನ್ನು ನೋಡಲಾರದೆ ದೈವಗ್ರಂಥದಲ್ಲಿನ ನಿಜವನ್ನು ಹೊರಗೆ ಇಡಬೇಕೆಂಬ ಉದ್ದೇಶದಿಂದ ನಾವು ಮೂರು ಗ್ರಂಥಗಳಲ್ಲಿನ ವಿಷಯಗಳನ್ನು ಪ್ರಸ್ತಾವಿಸಬೇಕಾಗಿ ಬಂದಿದೆ. ಮೂರು ಗ್ರಂಥಗಳು ಒಂದು ದೈವಗ್ರಂಥಕ್ಕೇ ಸಂಬಂಧವಾಗಿ ಇರುವುದರಿಂದ, ದೈವ ವಿಷಯಗಳೆಂಬ ದೃಷ್ಠಿಯಿಂದ ಹೇಳಿದ್ದೇವೆ ಹೊರತು, ಮತ ವಿಷಯಗಳೆಂಬ ಉದ್ದೇಶದಿಂದ ಹೇಳಲಿಲ್ಲ. ದೈವಗ್ರಂಥವು ಮೂರು ಭಾಗಗಳಾಗಿದ್ದರೂ, ಮೂವರು ಪ್ರವಕ್ತರಿಂದ ಬರೆಯಲ್ಪಟ್ಟಿದ್ದರೂ, ಅದು ಮಾನವರೆಲ್ಲರ ಸಮಸ್ಯೆಗಳ ಜ್ಞಾನದಿಂದ ಸಂಬಂಧಪಟ್ಟಿರುವುದರಿಂದ, ಪ್ರತಿ ಮನುಷ್ಯನಿಗೆ ಮೂರು ಗ್ರಂಥಗಳ ಮೇಲೆ ಸಮಾನವಾದ ಹಕ್ಕು ಇದೆ. ಆದ್ದರಿಂದ ಇದು ನಿಮ್ಮದು, ಅದು ನಮ್ಮದು ಎನ್ನುವುದಕ್ಕೆ ಅವಕಾಶವೇ ಇಲ್ಲ. ಈ ಕಾರಣಗಳಿಂದಲೇ ಸಾಟಿ ಮನುಷ್ಯನಾಗಿ ಜ್ಞಾನ ವಿಷಯಗಳಲ್ಲಿ ಯಾರೂ ಮೋಸ ಹೋಗಬಾರದೆಂಬ ಉದ್ದೇಶದಿಂದ ನಾನು ಹಿಂದುವಾಗಿ ಹುಟ್ಟಿದರೂ, ಮತ ಕಟ್ಟು ಪಾಡುಗಳು ಇಲ್ಲದೆ ಉಳಿದ ಮತ ಗ್ರಂಥಗಳೆಂದು ಎಲ್ಲರೂ ಎನ್ನುತ್ತಿದ್ದರೂ ನಾನು ಹಾಗೇ ಅನ್ನದೇ ಎಲ್ಲಾ ನನ್ನ ಗ್ರಂಥಗಳೆಂದೇ, ಎಲ್ಲರೂ ನನ್ನಂತಹ ಮನುಷ್ಯರೇ ಎಂಬ ಉದ್ದೇಶದಿಂದ ಮೂರು ಗ್ರಂಥಗಳ ವಿವರವನ್ನು ಬರೆಯುವುದು ನಡೆದಿದೆ.

ಒಂದುಕಾಲದಲ್ಲಿ ಕೆಲವು ಲಕ್ಷ ವರ್ಷಗಳ ಪೂರ್ವವು ಭಾರತ ದೇಶವು ಪ್ರಪಂಚಕ್ಕೆಲ್ಲಾ ಆಧ್ಯಾತ್ಮಿಕ ಕೇಂದ್ರವಾಗಿ ಇತ್ತು. ಭಾರತ ದೇಶದಲ್ಲಿ ಆಧ್ಯಾತ್ಮಿಕ ವಿದ್ಯೆಯೇ ಅಲ್ಲದೆ ಆಧ್ಯಾತ್ಮಿಕ ವಿದ್ಯೆಗಿರುವ ದೈವಶಕ್ತಿ ಕೂಡಾ ಹೆಚ್ಚಾಗಿ ಇರುತ್ತಿತ್ತು. ದೇವರು ಕಾಣಿಸದಿದ್ದರೂ ದೈವಶಕ್ತಿ ಪ್ರತ್ಯಕ್ಷ ಅನುಭವಕ್ಕೆ ಬರುತ್ತಿತ್ತು. ಆದಕಾರಣ ಎಲ್ಲರೂ ದೈವವನ್ನು ವಿಶ್ವಾಶಿಸುವ ಜ್ಞಾನಿಗಳಾಗಿ ಇರುತ್ತಿದ್ದರು. ಆದರೆ ಈದಿನ ಆದಿನಗಳ ಆಧ್ಯಾತ್ಮಿಕ ವಿದ್ಯೆ ಸ್ವಲ್ಪವೂ ಉಳಿಯದೇ, ಎಲ್ಲಾ ಕಲುಷಿತವಾಗಿ ಹೋಗಿ ಜ್ಞಾನ ಕಬ್ಜಾ ಮಾಡಲಾಗಿ, ಹೀಗೆ ಇರಬೇಕೆಂದು ಕೆಲವರಿಂದ ಜ್ಞಾನ ಶಾಸಿಸಲ್ಪಡುತ್ತಿರುವುದರಿಂದ ದೈವಶಕ್ತಿ ಎಲ್ಲಿಯೂ ಕಾಣಿಸದಂತೆ ಹೋಗಿದೆ.

ಅಂತಹ ಪರಿಸ್ಥಿತಿಯಲ್ಲಿ ಹೊಸದಾಗಿ ಹುಟ್ಟಿಬಂದವರಿಗೆ ದೇವರೆಂದರೆ ಯಾರು? ಎಂಬ ವಿಷಯವು ಮಾತ್ರ ತಿಳಿಯದೇ ಹೋಗಿದೆ. ಹುಟ್ಟಿದ ಪ್ರತಿಯೊಬ್ಬನಿಗೂ ಮತವೆಂದರೆ ಏನು? ತನ್ನ ಮತವು ಎಷ್ಟು ದೊಡ್ಡದೆಂದು ನೋಡಿಕೊಳ್ಳುತ್ತಿದ್ದಾನೆ ಹೊರತು ಮನುಷ್ಯನಿಗೆ ಬೇಕಾಗಿರುವುದು ಮತವಲ್ಲ ದೇವರು ಎಂದು ತಿಳಿಯಲಾರದೆ ಹೋಗುತ್ತಿರುವನು. ಚಿಕ್ಕಂದಿನಿಂದಲೂ ಮತದ ಬಗ್ಗೆ ಆಸಕ್ತಿ ಇರುವವನು ಮತದಿಂದಲೇ ದೇವರನ್ನು ತಿಳಿಯಬಹುದೆಂದು, ತಮ್ಮ ಮತ ಹಿರಿಯರು ಹೇಳಿದರೆ ಕೇಳಿ ಅದೇ ನಿಜವೆಂದು ತಿಳಿಯುತ್ತಿದ್ದಾನೆ. ಮತದಿಂದ ದೇವರು ತಿಳಿಯಲಾರನೆಂಬ ವಿಷಯ ಪೂರ್ತಿ ತಿಳಿಯದಂತಾಗಿದೆ. ಒಬ್ಬ ಮನುಷ್ಯ ಯಾವ ಮತದಲ್ಲಿ ಹುಟ್ಟಿದ್ದರೇ ಆ ಮತವೇ ಶ್ರೇಷ್ಠವೆಂದು, ಆ ಮತದಲ್ಲಿನ ದೇವರಿಗಿಂತಲೂ ಉಳಿದ ಯಾವ ದೇವರೂ ದೊಡ್ಡವನಲ್ಲವೆಂದು ತಮ್ಮ ಮತಸ್ಥರಿಂದ ಕೇಳಿ, ಅದೇ ನಿಜವಾದ ವಿಧಾನವೆಂದು ಪೂರ್ತಿಯಾಗಿ ನಂಬಿದ್ದಾನೆ. ತಮ್ಮ ಮತವು ಬೇರೆಯೆಂದು, ತಮ್ಮ ದೇವರು ಬೇರೆಯೆಂದು ಪ್ರತಿ ಮತಸ್ಥನು ತಮ್ಮ ಮತಹಿರಿಯರಿಂದ ತಿಳಿಯಲ್ಪಟ್ಟ ಮಾತು ಪೂರ್ತಿ ಸತ್ಯವೆಂದು ನಂಬಿ ಅದೇ ಉದ್ದೇಶವನ್ನು ಹೊಂದಿರುವನು. ಇದೇ ಉದ್ದೇಶವೇ ಪ್ರತಿ ಮತದಲ್ಲಿ ಹುಟ್ಟಿದವರಲ್ಲಿ ಇರುವುದರಿಂದ ಮತಭಾವನೆಗಳು ಪ್ರತಿ ಮನುಷ್ಯನಲ್ಲಿಯೂ ಚಿಕ್ಕಂದಿನಿಂದಲೇ ನಾಟಿಕೊಂಡಿವೆ ಎಂದು ಹೇಳಬಹುದು.

ಸಮಾಜದಲ್ಲಿನ ಮನುಷ್ಯರೆಲ್ಲರೂ ಒಂದೇ ಅವಯವಗಳು ಹೊಂದಿ ಹುಟ್ಟಿದರೂ, ಆಹಾರದ ಮೂಲಕವೇ ಬದುಕುತ್ತಿದ್ದರೂ, ಆಲೋಚನೆಗಳಿಂದಲೇ ಪ್ರತಿ ವಿಷಯವನ್ನು ಆಲೋಚಿಸುತ್ತಿದ್ದರೂ, ಒಂದು ಮತ ವಿಷಯದ ಹತ್ತಿರ ಮಾತ್ರ ಎಷ್ಟು ಮೇಧಾವಿಗಳಾದರೂ ತಮ್ಮ ಬುದ್ಧಿಯಿಂದ ಆಲೋಚಿಸದೆ, ತಮ್ಮ ಬುದ್ಧಿಯನ್ನು ಇತರರು ಕಬ್ಜಾ ಮಾಡಿದಂತೆ ತಮ್ಮ ಮತ ಹಿರಿಯರು ಹೇಳಿದ ಮಾತುಗಳನ್ನೇ ಮಾತನಾಡುತ್ತಿದ್ದಾರೆ ಹೊರತು, ತಮ್ಮ ಸ್ವಂತ ಬುದ್ಧಿಯಿಂದ ಸ್ವಲ್ಪವೂ ಯೋಚಿಸುತ್ತಿಲ್ಲ. ಹಾಗಿರುವಾಗ ವಶೀಕರಣ ಮಾಡಲ್ಪಟ್ಟವನು ವಶ ಮಾಡಿಕೊಂಡವನ ಬುದ್ಧಿ ಪ್ರಕಾರವೇ ಮಾತನಾಡಿದಂತೆ, ತನ್ನ

ಬುದ್ಧಿ ಪ್ರಕಾರ ಮಾತನಾಡದಂತೆ ಮತನಾಡುವುದು ನಡೆಯುತ್ತಿದೆ. ಕೆಲವು ವಿಷಯಗಳನ್ನು ಕುರಿತು ಟೀ.ವೀ ಚಾನಲ್‌ಗಳಲ್ಲಿ ಚರ್ಚಾ ವೇದಿಕೆಗಳು ನಡೆಯುತ್ತಿರುವಾಗ ಆಗಾಗ ನೋಡಿದ್ದೇವೆ. ಉಳಿದ ಪ್ರಪಂಚ ವಿಷಯಗಳಲ್ಲಿ ತಮ್ಮ ಬುದ್ಧಿವಂತಿಕೆಯನ್ನೆಲ್ಲಾ ಉಪಯೋಗಿಸಿ ಮತನಾಡುವವರು ಒಂದು ದೇವರ ಜ್ಞಾನ ವಿಷಯಗಳಲ್ಲಿ ತಮ್ಮ ಬುದ್ಧಿಯಿಂದ ಮಾತನಾಡದೆ ಮೊದಲೇ ನಿರ್ಣಯ ಮಾಡಲಾಗಿರುವ ತಮ್ಮ ಹಿರಿಯರ ಭಾವನೆಗಳ ಪ್ರಕಾರ ಮಾತನಾಡುತ್ತಿದ್ದಾರೆ. ಹಾಗಿರುವಾಗ ಅವರ ಮೇಧಸ್ಸು ಎನ್ನುವುದು ಮೊದಲೇ ಅವರ ಮತ ಹಿರಿಯರಿಂದ ಕಬ್ಜಾ ಮಾಡಲಾಗಿರುವುದೆಂದು ಅರ್ಥವಾಗಿ ಹೋಗುತ್ತಿದೆ. ಒಂದು ಚರ್ಚಾ ವೇದಿಕೆಯಲ್ಲಿ ಮೂವರು ಮತಸ್ಥರಾಗಲೀ, ಇಬ್ಬರು ಮತಸ್ಥರಾಗಲೀ ಕೂಡಿ ಮಾತನಾಡಿದಾಗ ಅವರ ಮತಭಾವನೆಗಳ ಪ್ರಕಾರವೇ ಅವರು ಮಾತನಾಡುತ್ತಿದ್ದಾರೆ ಆದರೆ, ಅವರ ದೈವ ಗ್ರಂಥಗಳ ಪ್ರಕಾರ ಅವರು ಮಾತನಾಡುತ್ತಿಲ್ಲ. ಮೊದಲೇ ಕಲಿತುಕೊಂಡ ತಮ್ಮ ಮತವಿಧಾನದ ಪ್ರಕಾರವೇ ಮಾತನಾಡುತ್ತಿದ್ದಾರೆ ಹೊರತು, ದೇವರು ಸ್ವತಃವಾಗಿ ಗ್ರಂಥರೂಪಗಳಲ್ಲಿ ಕೊಟ್ಟಿರುವ ಜ್ಞಾನಪ್ರಕಾರ ಮಾತನಾಡುತ್ತಿಲ್ಲ.

ಮನುಷ್ಯನಲ್ಲಿ ಮತ ವಿಧಾನವು ಯಾವಾಗ ಸೇರಿಕೊಂಡಿದೆಯೊ ಆಗಲೇ ಮನುಷ್ಯ ಅದಕ್ಕೆ ವಶವಾಗಿ, ತನ್ನ ಬುದ್ಧಿ ಸ್ವಾತಂತ್ರ್ಯವನ್ನು ಕಳೆದುಕೊಂಡು ವಿಚಕ್ಷಣೆ ಇಲ್ಲದೆ ಮಾತನಾಡುತ್ತಿದ್ದಾನೆ. ಬುದ್ಧಿಯೊಂದರ ವಿಚಕ್ಷಣೆ ಇಲ್ಲದಿರುವಾಗ ತಮ್ಮ ಹಿರಿಯರು ಯಾರನ್ನು ದೇವರೆಂದು ಹೇಳಿದ್ದರೇ ಅವನನ್ನೇ ದೇವರೆನ್ನುವರು. ಯಾರನ್ನು ದುಷ್ಟನೆಂದು ಹೇಳಿರುವರೋ ಅವನನ್ನೇ ದುಷ್ಟನೆಂದು ಹೇಳುವರು. ಹಿಂದೂ ಮತದಲ್ಲಿರುವ ರಾವಣಬ್ರಹ್ಮ ವಿಷಯದಲ್ಲಿ ಅದೇ ನಡೆದಿದೆ. ಪ್ರಪಂಚ ಜ್ಞಾನದಲ್ಲಿ ತ್ರಿಕಾಲ ಜ್ಞಾನಿ, ದೈವವಿಷಯದಲ್ಲಿ ಅಪರಬ್ರಹ್ಮನಾದ ರಾವಣಬ್ರಹ್ಮ ಕೊನೆಗೆ ಒಬ್ಬ ದುಷ್ಟನನ್ನಾಗಿ ಹೋಲಿಸಿ ಪ್ರಚಾರ ಮಾಡಿದರೆ, ಎಲ್ಲರೂ ಅದನ್ನೇ ಅಂದಿದ್ದಾರೆ ಹೊರತು ತಮ್ಮ ಬುದ್ಧಿಯಿಂದ ಸ್ವಲ್ಪವಾದರೂ ಇದು ನಿಜವಾ, ಸುಳ್ಳಾ ಎಂದು ಯೋಚಿಸಲಿಲ್ಲ. ಪಂಡಿತರು, ಪಾಮರರು,

ಬುದ್ಧಿಯಿರುವವರು, ಬುದ್ಧಿಯಿಲ್ಲದವರು ರಾವಣ ಬ್ರಹ್ಮನನ್ನು ಸಾಮಾನ್ಯ ಮನುಷ್ಯನಿಗಿಂತಲೂ ಹೀನವಾಗಿ ಮಾತನಾಡುತ್ತಿದ್ದಾರೆ. ಈ ವಿಷಯವನ್ನು ಉದಾಹರಣೆಯಾಗಿ ಹೇಳಿಕೊಂಡಹಾಗೆ ಉಳಿದ ಜ್ಞಾನ ವಿಷಯಗಳಲ್ಲಿ ಅದೇ ವಿಧವಾಗಿ ಮಾತನಾಡುತ್ತಿದ್ದಾರೆ. ಮತ ಭಾವನೆಗಳು ತಲೆಗೇರಿಸಿಕೊಂಡವನು ಜ್ಞಾನವನ್ನು ಅಜ್ಞಾನವಾಗಿ, ಅಜ್ಞಾನವನ್ನು ಜ್ಞಾನವಾಗಿ ಹೋಲಿಸಿಕೊಳ್ಳುತ್ತಿದ್ದಾನೆ. ಹಾಗಿರುವಾಗ ತಾನು ತಿಳಿಯಬೇಕಾದ ಜ್ಞಾನ ವಿಷಯಗಳನ್ನು ಬಿಟ್ಟು, ತನಗೆ ಅವಶ್ಯವಿಲ್ಲದ ಅಜ್ಞಾನ ವಿಷಯಗಳನ್ನು ತಿಳಿದುಕೊಳ್ಳುತ್ತಿದ್ದಾನೆ. ಈ ವಿಧವಾಗಿ ಹುಟ್ಟಿದ ಪ್ರತಿ ಮನುಷ್ಯ ಆತನು ಹುಟ್ಟಿರುವ ಮತದಲ್ಲಿ ಸಿಲುಕಿಕೊಂಡು ಅಜ್ಞಾನ ಭಾವನೆಗಳೊಳಗೆ ಹೊರಟುಹೋಗುತ್ತಿದ್ದಾನೆ. ತನಗಿರುವ ಭಾವನೆಗಳ ಪ್ರಕಾರವೇ ಮಾತನಾಡುತ್ತಿದ್ದಾನೆ. ಹಾಗೆ ಮಾತನಾಡುವವನು ನಾನು ಬಹಳ ಬುದ್ಧಿವಂತನಾಗಿ ಮಾತನಾಡುತ್ತಿರುವೆ ಎಂದು ಅಂದುಕೊಳ್ಳುತ್ತಿದ್ದರೂ, ಮತಾತೀತರಾದವರಿಗೆ ಅವರ ಮಾತುಗಳಲ್ಲಿನ ಅಜ್ಞಾನವು ಪ್ರತ್ಯಕ್ಷವಾಗಿ ಕಾಣಿಸುತ್ತಿದೆ.

ನನ್ನ ಮತದಲ್ಲಿ ನಾನು ದೊಡ್ಡವನೆಂದು ಅಂದುಕೊಳ್ಳುವ ಮನುಷ್ಯ ತಾನು ದೊಡ್ಡದಾಗಿ ಮತನಾಡುತ್ತಿರುವೆನೆಂದು ಅಂದುಕೊಂಡರೂ, ಆತನ ಬುದ್ಧಿ ಹೀನತೆ ಹೊರಗೆ ಹೇಗೆ ಕಾಣಿಸುತ್ತಿದೆಯೋ ಉದಾಹರಣೆಗೆ ಒಂದು ಪ್ರತ್ಯಕ್ಷ ಸಂಘಟನೆಯನ್ನು ತೆಗೆದುಕೊಂಡು ನೋಡೋಣ. ಒಂದು ಟೀ.ವೀ ಚಾನಲ್‌ನಲ್ಲಿ ಮೂವರು ಮೂರು ಮತಗಳ ಪ್ರತಿನಿಧಿಗಳು, ಒಬ್ಬ ಹೇತುವಾದಿ ಮತ್ತು ಒಬ್ಬ ಸಮನ್ವಯಕರ್ತ ಒಟ್ಟು ಐವರು ಪಾಲ್ಗೊಂಡಿದ್ದಾರೆ. ಸಮನ್ವಯಕರ್ತ ಟೀ.ವೀ ನ್ಯೂಸ್ ಅನೌನ್ಸರ್ ಆಗಿರುವಾಗ ಹಿಂದೂಮತ ಕಡೆಯಿಂದ ಹಿಂದೂ ಪರಿಷತ್ ಕಾರ್ಯಕರ್ತರೊಬ್ಬರು ಬಂದಿರುವಾಗ, ಕ್ರೈಸ್ತವರ ಕಡೆಯಿಂದ ಒಬ್ಬ ಪಾಸ್ಟರ್ ಬಂದರೆ, ಮುಸ್ಲಿಮ್‌ರ ಕಡೆಯಿಂದ ಮುಸ್ಲಿಮ್ ಮತಹಿರಿಯ ಬರುವುದು ನಡೆದಿದೆ. ಅವರ ಸಂಭಾಷಣೆ ಕೆಳಗಿನ ವಿಧವಾಗಿ ಮುಂದುವರೆಯಿತು.

**ಸಮನ್ವಯ ಕರ್ತ :–** ಪ್ರಸ್ತುತವು ಪ್ರದರ್ಶಿಸಲ್ಪಡುತ್ತಿರುವ "ಪೀ.ಕೆ" ಚಲನ ಚಿತ್ರದ ಮೇಲೆ ಸ್ವಲ್ಪ ವಿವಾದ ಏರ್ಪಟ್ಟಿದೆ. ಆ ಸಿನಿಮಾದಲ್ಲಿ ಹಿಂದೂಗಳ ಮನೋ

ಭಾವಗಳನ್ನು ಹೀಯಾಳಿಸುವ ವಿಧವಾಗಿ ದೃಶ್ಯಗಳಿವೆಯೆಂದು, ಹಾಗೆಯೇ ಕೆಲವು ಮಾತುಗಳು ಸಹ ಹಿಂದೂಗಳಿಗೆ ವಿರುದ್ಧವಾಗಿ ಇವೆಯೆಂದು ಹಿಂದೂಗಳು ಒಂದುಕಡೆ ಹೇಳುತ್ತಿರುವಾಗ, ಮತ್ತೊಂದುಕಡೆ ಮುಸ್ಲಿಮರು ಕೂಡಾ ಸ್ವಲ್ಪ ಅಭ್ಯಂತರವನ್ನು ತಿಳಿಸಿದ್ದಾರೆ. ಯಾವುದು ಏನಾದರೂ ಹಿಂದೂ ಸಂಸ್ಥೆಗಳು ಸಿನಿಮಾವನ್ನು ನಿಷೇಧಿಸಬೇಕೆಂದು ಅನ್ನುತ್ತಿವೆ. ಮುಸ್ಲಿಮರು ಮಸೀದ್ ಸೀನ್‌ಅನ್ನು ಪೂರ್ತಿ ತೆಗೆದು ಹಾಕಬೇಕೆನ್ನುತ್ತಿದ್ದಾರೆ. ಕ್ರೈಸ್ತವರು ಏನೂ ಮಾತನಾಡದೆ ತಟಸ್ಥರಾಗಿ ಇದ್ದಾರೆ. ಈಗ "ಪೀ.ಕೆ" ಸಿನಿಮಾವನ್ನು ಕುರಿತು ಚರ್ಚೆ ಮುಂದುವರೆಯುತ್ತದೆ. ಪ್ರಸ್ತುತ ಕ್ರೈಸ್ತವರು ಈ ಸಿನಿಮಾ ವಿಷಯದಲ್ಲಿ ಏಕೆ ಮಾತನಾಡುತ್ತಿಲ್ಲ? ಸಿನಿಮಾದಲ್ಲಿ ಅವರಿಗೆ ಇಷ್ಟವಿಲ್ಲದ ವಿಷಯಗಳು ಇವೆಯಾ ಅಥವಾ ಇಲ್ಲವಾ? ಎಂದು ಮೊದಲು ಕ್ರೈಸ್ತವರ ಪರವಾಗಿ ಮತನಾಡಬೇಕಾಗಿ ಪಾಸ್ಟರ್‌ರವರನ್ನು ಕೋರುತ್ತಿದ್ದೇವೆ.

**ಪಾಸ್ಟರ್ :–** ನಮ್ಮ ಮತವು ಶಾಂತಿಯಿಂದ ಕೂಡಿಕೊಂಡಿರುವ ಮತ. ನಮ್ಮ ಪ್ರವಕ್ತ ಕರುಣಾಮಯನು, ನಾವು ಯಾರನ್ನೂ ತಿರಸ್ಕಾರವಾಗಿ, ದೂಷಿಸುವಂತೆ ಮಾತನಾಡುವುದಿಲ್ಲ. ಯಾರಾದರೂ ಎಡಗಡೆ ಕೆನ್ನೆ ಮೇಲೆ ಹೊಡೆದರೆ ಬಲಗಡೆ ಕೆನ್ನೆ ತೋರಿಸಿರಿ ಎಂದು ನಮ್ಮ ಯೇಸು ಹೇಳಿದ್ದಾನೆ. ಆದ್ದರಿಂದ ನಮ್ಮನ್ನು ಯಾರೇನೆಂದರೂ ಮೌನವಾಗಿಯೇ ಇರುತ್ತೇವೆ.

**ಸಮನ್ವಯ ಕರ್ತ :–** ನೀವು ಮೌನವಾಗಿರುವುದು ಒಳ್ಳೆಯದೇ ಆದರೆ, "ಪೀ.ಕೆ" ಸಿನಿಮಾದಲ್ಲಿ ನಿಮಗೆ ತೊಂದರೆಯಾಗಿರುವುದು ಏನಾದರೂ ಇದೆಯಾ ಇಲ್ಲವಾ? ಎಂದು ಕೇಳುತ್ತಿದ್ದೇವೆ. ಅದಕ್ಕೆ ಮಾತ್ರ ಸಮಾಧಾನ ಹೇಳಿರಿ.

**ಪಾಸ್ಟರ್ :–** ನಮ್ಮ ಚರ್ಚಿಗೆ ಹೂವು, ತೆಂಗಿನಕಾಯಿ ಮೊದಲಾದ ಪೂಜಾ ದ್ರವ್ಯಗಳನ್ನು ತೆಗೆದುಕೊಂಡು ಬರುವುದೇ ತಪ್ಪು. ಚರ್ಚಿನಲ್ಲಿ ತೆಂಗಿನಕಾಯಿ ಹೊಡೆಯುವುದು ನಮಗೆ ವಿರುದ್ಧವಾಗಿ, ನಮ್ಮ ಆರಾಧನೆಗೆ ವಿರುದ್ಧವಾಗಿ ಮಾಡುವುದೇ ಅಲ್ಲವೇ! ಆ ಸಿನಿಮಾದಲ್ಲಿ ಗಮನಿಸಿದರೇ ಚರ್ಚಿನೊಳಗೆ ಹೋಗಿ

ತೆಂಗಿನಕಾಯನ್ನು ಹೊಡೆಯುವವರೆಗು ನಮ್ಮ ಕ್ರೈಸ್ತವರು ಏನು ಅನ್ನಲಿಲ್ಲ. ತೆಂಗಿನಕಾಯನ್ನು ಹೊಡೆದ ನಂತರ ಕೂಡಾ ಆತನನ್ನು ಚರ್ಚ್ ಹೊರಗೆ ಕರೆತಂದು ಬಿಟ್ಟೆವು ಹೊರತು ಆತನನ್ನು ಏನೂ ಅನ್ನಲಿಲ್ಲ. ಚರ್ಚಿನೊಳಗೆ ಹೋಗುವುದು ತಪ್ಪೇ ಆದರೂ ನಾವು ಸಹನೆಯಿಂದ ಆ ಸಿನಿಮಾ ಕುರಿತು ಏನು ಮಾತನಾಡಲಿಲ್ಲ. ಅದೇ ಸಿನಿಮಾದಲ್ಲಿ ಮಸೀದ್ ಹತ್ತಿರಕ್ಕೆ ಹೋದವನನ್ನು ಮುಸ್ಲಿಮರು ಮಸೀದ್ ಒಳಗೆ ಹೋಗುವ ಮೊದಲೇ ಕೋಪದಿಂದ ಹೊರ ಹಾಕಿರುವುದು ನೀವು ನೋಡಿದಿರಿ ಅಲ್ಲವೇ! ನಮ್ಮ ಚರ್ಚಿನೊಳಗೆ ಬಂದು ತೆಂಗಿನಕಾಯಿ ಹೊಡೆದರೂ ನಾವು ಸರಿಪಡಿಸಿ ಹೊರಗೆ ಕಳುಹಿಸಿದೆವು. ಅಷ್ಟು ಹೊರತು ಸಿನಿಮಾದಲ್ಲು ಕೂಡಾ ಕೋಪಿಸಿಕೊಳ್ಳಲಿಲ್ಲ, ಆತನನ್ನು ಹೊರಹಾಕಲಿಲ್ಲ.

**ಸಮನ್ವಯ ಕರ್ತ :–** ಈಗ ಈ ವಿಷಯದಲ್ಲಿ ಮುಸ್ಲಿಮರು ಕೂಡಾ ಈ ಸಿನಿಮಾ ಮೇಲೆ ಸ್ವಲ್ಪ ವ್ಯತಿರೇಖತೆಯನ್ನು ತೋರಿಸುವುದು ನಡೆದಿದೆ. ಅದರಲ್ಲಿ ನಿಮಗೆ ಸಮಸ್ಯಕರವಾದ ದೃಶ್ಯಗಳು ಏನಿವೆ? ಇದಕ್ಕೆ ಮುಸ್ಲಿಮ್ ಕಡೆಯವರಿಂದ ಅವರ ಮತಹಿರಿಯರು ಸಮಾಧಾನ ಹೇಳುತ್ತಾರೆ.

**ಮುಸ್ಲಿಮ್ :–** ಅದು ಸಿನಿಮಾ ಆದಕಾರಣ ನಾವು ಅದರಲ್ಲಿನ ವಿಷಯಗಳನ್ನು ದೊಡ್ಡದಾಗಿ ತಲೆ ಕೆಡಿಸಿಕೊಳ್ಳಲಿಲ್ಲ. ಅದರಲ್ಲಿ ಹೀರೋ ಆಗಿರುವ ವ್ಯಕ್ತಿ ಬ್ರಾಂದೀ ಬಾಟಿಲ್ ತೆಗೆದುಕೊಂಡು ಮಸೀದೀಗೆ ಬರುವುದು ಮುಸ್ಲಿಮರಿಗೆ ಯಾರಿಗೂ ಸಹಿಸಿಕೊಳ್ಳಲಾರದ ವಿಷಯ. ಸಿನಿಮಾದಲ್ಲಿ ಮುಸ್ಲಿಮರು ಹೇಗೆ ಸ್ಪಂದಿಸಬೇಕೋ ಹಾಗೆಯೇ ಸ್ಪಂದಿಸಿದಂತೆ ತೋರಿಸಿದ್ದಾರೆ. ಮಸೀದ್ ಹತ್ತಿರದಿಂದ ತಳ್ಳಿಹಾಕುವುದು ನಮ್ಮ ಕರ್ತವ್ಯ. ಅಷ್ಟೇ ಹೊರತು ಆತನನ್ನು ಹೊಡೆದಂತಾಗಲಿ, ಗಾಯಪಡಿಸಿ ದಂತಾಗಲೀ ಇಲವಲ್ಲ! ಮೊದಲು ನಾವು ಈ ಸಿನಿಮಾವನ್ನು ಕುರಿತು ಸ್ವಲ್ಪ ಆಂದೋಳನೆ ಮಾಡಿದರೂ ನಂತರ ಅದು ಸಿನಿಮಾ ಆದಕಾರಣ ಅದರಲ್ಲಿ ಏನೂ ತಿಳಿಯದ ಒಬ್ಬ ಅಮಾಯಕನು ಮಾಡುವ ಕೆಲಸವಾದ್ದರಿಂದ ನಂತರ ನಾವು ಅದನ್ನು ಕುರಿತು ಏನೂ ಮಾತನಾಡಲಿಲ್ಲ, ಆಂದೋಳನೆ ಮಾಡಲಿಲ್ಲ.

**ಸಮನ್ವಯ ಕರ್ತ :–** ಸಿನಿಮಾದಲ್ಲಿ ಹೀರೋ ಆಗಿರುವ ವ್ಯಕ್ತಿ ಮುಸ್ಲಿಮ್ ಮತಸ್ಥನಾಗಿರುವುದರಿಂದ ಪ್ರತ್ಯೇಕಿಸಿ ಹಿಂದೂಗಳಿಗೆ ವಿರುದ್ಧವಾಗಿ ಈ ಸಿನಿಮಾ ಇರುವುದೆಂದು ಕೆಲವರನ್ನುತ್ತಿದ್ದಾರೆ. ಮುಸ್ಲಿಮ್‌ರಾಗಿ ನೀವೇನು ಹೇಳುತ್ತೀರಾ?

**ಮುಸ್ಲಿಮ್ :–** ಸಿನಿಮಾದಲ್ಲಿ ಹೀರೋ ಪಾತ್ರ ಪೋಷಿಸಿರುವುದು ಮುಸ್ಲಿಮ್ ಎಂಬ ಮಾತು ವಾಸ್ತವವೇ. ಆದರೇ ಸಿನಿಮಾ ತಯಾರಿಯಾಗುವುದು ಡೈರೆಕ್ಟರನ್ನು ಅನುಸರಿಸಿ, ಕಥೆಯನ್ನು ಬರೆದಿರುವವನನ್ನು ಅನುಸರಿಸಿ ಇರುತ್ತದೆ. ಹೀರೋ ಆಗಿರುವವನು ಡೈರೆಕ್ಟರ್ ಹೇಳಿದಹಾಗೆ ಮಾಡುವನು ಹೊರತು ತನ್ನ ಸ್ವಂತವಾಗಿ ಇಷ್ಟ ಬಂದಹಾಗೆ ಮಡುವುದಿಲ್ಲ ಅಲ್ಲವೇ! ಆ ಸಿನಿಮಾ ನಿರ್ಮಾಪಕ, ಡೈರೆಕ್ಟರ್ (ದರ್ಶಕನು), ಸ್ಟೋರೀ ಬರೆದಿರುವವನು ಮೂವರೂ ಹಿಂದೂಗಳೇ. ಆ ಮೂವರನ್ನು ಅನುಸರಿಸಿ "ಪೀ.ಕೆ" ಸಿನಿಮಾ ತಯಾರಿಯಾಗಿದೆಯೇ ಹೊರತು ಹೀರೋನನ್ನು ಅನುಸರಿಸಿ ತಯಾರಾಗಿಲ್ಲ. ಹಾಗಿರುವಾಗ ಸಿನಿಮಾದಲ್ಲಿರುವ ಹಿಂದೂ ವಿರುದ್ಧತೆಯನ್ನು ಹೀರೋ ಮೇಲಕ್ಕೆ ಹೊರಿಸುವುದು ಒಳ್ಳೆಯದಲ್ಲ. ಹೀರೋಗೆ ಯಾವ ಸಂಬಂಧವಿಲ್ಲದ ವಿಷಯವಾದ್ದರಿಂದ ಸಿನಿಮಾನ ತಯಾರು ಮಾಡಿದ ನಿರ್ಮಾಪಕನಿಗೂ, ದರ್ಶಕನಿಗೂ ಸಂಬಂಧವಾಗಿರುವುದರಿಂದ ಯಾರೂ ಹೀರೋನನ್ನು ನಿಂದಿಸುವುದಕ್ಕೆ ಅವಕಾಶವಿಲ್ಲ.

**ಸಮನ್ವಯ ಕರ್ತ:–** "ಪೀ.ಕೆ" ಸಿನಿಮಾದಲ್ಲಿ ಹಿಂದೂ ವ್ಯತಿರೇಖ ವಾಕ್ಯಗಳು, ದೃಶ್ಯಗಳು ಇರುವವೆಂದು ಹಿಂದೂಗಳು ಕಳೆದ ಎರಡು ಮೂರು ದಿನಗಳಿಂದ ಆಂದೋಳನೆ ಮಾಡುವುದು ಸಿನಿಮಾವನ್ನು ಕೆಲವು ಥಿಯೇಟರ್‌ಗಳಲ್ಲಿ ನಿಲ್ಲಿಸಿರುವುದು ನಡೆದಿದೆ. ಹಾಗಿದ್ದರೂ ಕೆಲವರು ಈ ಸಿನಿಮಾವನ್ನು ಆಸಕ್ತಿಯಿಂದಲೇ ನೋಡುತ್ತಿದ್ದಾರೆ. ಎಲ್ಲರಿಗೂ ಇಷ್ಟವಾದ ಸಿನಿಮಾ ಕೆಲವು ಹಿಂದೂಗಳಿಗೆ ಮಾತ್ರ ಯಾಕೆ ಇಷ್ಟವಾಗಲಿಲ್ಲ? ಅದರಲ್ಲಿನ ಲೋಪ ಏನಿದೆಯೋ ತಿಳಿಸಿರೆಂದು ಹಿಂದೂವಾಗಿರುವ ನಿಮ್ಮನ್ನು ಕೇಳುತ್ತಿದ್ದೇವೆ.

**ಹಿಂದೂ :–** ಈ ಸಿನಿಮಾ ಒಟ್ಟಾರೆ ಹಿಂದೂ ಸಾಂಪ್ರದಾಯಗಳಿಗೆ ವಿರುದ್ಧವಾಗಿದೆ.

ಹಿಂದೂ ದೇವತೆಗಳನ್ನು ಹೀಯಾಳಿಸುವುದು ನಡೆದಿದೆ. ತ್ರಿಮೂರ್ತಿಗಳಲ್ಲಿ ಒಬ್ಬನಾದ ಶಿವನನ್ನು ಬೀದಿಯಲ್ಲಿ ಓಡಿಸಿ ಹೀಯಾಳಿಸುವುದು ನಡೆದಿದೆ. ಶಿವನನ್ನು ಬಾತ್‌ರೂಮಿನಲ್ಲಿ ಬಂಧಿಸಿ ಇನ್ನೆಲ್ಲಿಗೆ ಹೋಗುತ್ತೀಯೆಂದು ಕೇಳುವುದರಿಂದ ಹಿಂದೂಗಳ ಮನೋಭಾವಗಳು ಗಾಯಗೊಂಡಿವೆ. ಆದ್ದರಿಂದ ಹಿಂದೂಗಳಾದ ನಾವು ಆಂದೋಳನೆ ಮಾಡಬೇಕಾಗಿ ಬಂದಿದೆ.

**ಹೇತುವಾದಿ :–** ಮನೋಭಾವಗಳು ಎಂದರೆ ಯಾವುವು? ಯಾರಿಗಿಷ್ಟಬಂದ ಭಾವನೆಗಳು ಅವನ ಮನೋಭಾವಗಳಾದರೆ, ಕಳ್ಳರಿಗೆ, ವ್ಯಭಿಚಾರಿಗಳಿಗೆ ಕೂಡಾ ಅವರ ಮನೋಭಾವಗಳು ಇರುತ್ತವಲ್ಲವೇ! ಕಳ್ಳತನ ಮಾಡಬೇಡವೆಂದರೇ ನಮ್ಮ ಮನೋಭಾವಗಳು ಗಾಯಗೊಳ್ಳುವುದೆಂದು ಕಳ್ಳರನ್ನುತ್ತಾರೆ. ಹಾಗೆಯೇ ವ್ಯಭಿಚಾರ ಮಾಡಬೇಡ ಎಂದರೆ ನಮ್ಮ ಮನೋಭಾವಗಳಿಗೆ ವಿರುದ್ಧವೆಂದು ಅವರನ್ನುತ್ತಾರೆ. ಆದ್ದರಿಂದ ನಮಗಿರುವ ಮನೋಭಾವಗಳು ಒಳ್ಳೆಯವೋ ಕೆಟ್ಟವೋ ಮೊದಲು ನಿರ್ಣಯಿಸಿಕೊಂಡರೇ ಚೆನ್ನಾಗಿರುತ್ತದೆ. ಯಾವುದಕ್ಕಾದರೂ ಒಂದು ಶಾಸ್ತ್ರಬದ್ಧತೆ ಇರುವುದು ಚೆನ್ನಾಗಿರುತ್ತದೆ.

**ಹಿಂದೂ :–** ಹಿಂದೂಗಳು ದೇವತೆಗಳನ್ನು ಆರಾಧಿಸುವುದು ಸನಾತನ ಧರ್ಮ. ಹಿಂದೂಗಳು ತಮ್ಮ ದೇವತೆಗಳ ಮೇಲೆ ಭಕ್ತಿ ಹೊಂದಿರುವುದರಿಂದ ದೇವತೆಗಳನ್ನು ಅವಮಾನ ಪಡಿಸಿದರೆ ಹಿಂದೂಗಳ ಮನೋಭಾವಗಳು ನೋವುಂಟುಮಾಡಿದಂತೆ ಅಲ್ಲವೇ! ಹಿಂದೂಗಳ ಭಕ್ತಿಯನ್ನು ವಿಶ್ವಾಸವನ್ನು ಒಳ್ಳೆಯ ಭಾವಗಳು ಅಲ್ಲವೆನ್ನುತ್ತೀರಾ? ಒಬ್ಬ ಹಿಂದೂವಾಗಿ ಸಿನಿಮಾದಲ್ಲಿ ಶಿವನನ್ನು ಅವಮಾನಿಸಿದಕ್ಕೆ ನನ್ನ ಮನಸ್ಸು ದುಃಖಪಟ್ಟಿತು. ಆದಕಾರಣ ಹಿಂದೂಗಳ ಮನೋಭಾವಗಳು ಗಾಯಗೊಂಡಿರುವುದೆಂದು ಹೇಳಿದ್ದೇನೆ. ಇದನ್ನು ಶಾಸ್ತ್ರವಲ್ಲ ಎನ್ನುತ್ತೀರಾ?

**ಹೇತುವಾದಿ :–** ಇಂದೂ ಶಾಸ್ತ್ರದ ಪ್ರಕಾರ ಅಂತಹ ಮನೋಭಾವಗಳು ತಪ್ಪೆಂದು ನಮ್ಮ ಹೇತುವಾದಿಗಳಿಗೇ ತಿಳಿದಿರುವಾಗ ನಿಮಗೇಕೆ ತಿಳಿದಿಲ್ಲ?

ಹಿಂದೂಗಳಿಗೆ ಐದುಸಾವಿರ ವರ್ಷಗಳ ಪೂರ್ವವೇ ಧರ್ಮಸಂಸ್ಥಾಪನೆ ಸಲುವಾಗಿ ಭಗವದ್ಗೀತೆ ಹೇಳಲ್ಪಟ್ಟಿದೆ. ಭಗವದ್ಗೀತೆಯಲ್ಲಿ ಕ್ಷೇತ್ರ ಕ್ಷೇತ್ರಜ್ಞ ವಿಭಾಗ ಯೋಗವೆಂಬ ಅಧ್ಯಾಯದಲ್ಲಿ ಹನ್ನೊಂದನೆಯ ಶ್ಲೋಕದಲ್ಲಿ **"ಮಯ ಚಾನನ್ಯ ಯೋಗೇನ ಭಕ್ತಿ ರವ್ಯಭಿಚಾರಿಣೀ"** ಎಂದು ಇದೆ. ಕನ್ನಡದಲ್ಲಿ ಅದರ ಅರ್ಥಪ್ರಕಾರ **"ನನ್ನನ್ನು ಅಲ್ಲವೆಂದು, ನನ್ನ ಯೋಗವನ್ನು ಅಲ್ಲವೆಂದು ಅನ್ಯವಾದ ದೇವತೆಗಳ ಮೇಲೆ ಧ್ಯಾಸ ಇಟ್ಟುಕೊಳ್ಳುವುದು ಭಕ್ತಿ ಭಾವದಲ್ಲಿ ವ್ಯಭಿಚರಿಸಿದಂತೆಯೇ ಆಗುತ್ತದೆ."** ಎಂದು ದೇವರೇ ಹೇಳಿದ್ದಾನೆ ಅಷ್ಟೇಅಲ್ಲದೇ ವಿಜ್ಞಾನ ಯೋಗವೆಂಬ ಅಧ್ಯಾಯದಲ್ಲಿ 23ನೇ ಶ್ಲೋಕದಲ್ಲಿ...

***ಶ್ಲೋ॥ ಅನ್ತವತ್ತು ಫಲಂ ತೇಷಾಂ ತದ್ಭವ ತ್ಯಲ್ಪ ಮೇಧಸಾಮ್ ।***
***ದೇವಾಂದೇವ ಯಜೋಯಾನ್ತಿ ಮದ್ಭಕ್ತಾ ಯಾನ್ತಿ ಮಾಮಪಿ॥***

**ಭಾವಾರ್ಥ :–** "ಕಡಿಮೆ ಮೇದಸ್ಸುವುಳ್ಳವರು ಸ್ವಲ್ಪ ಫಲಿತಗಳನ್ನೇ ಹೊಂದುತ್ತಿರುತ್ತಾರೆ. ಅಂತಹ ಬುದ್ಧಿಯಿಲ್ಲದವರು ಇತರ ದೇವತೆಗಳನ್ನು ಆರಾಧಿಸಿದರೇ, ನನ್ನ ಭಕ್ತರು ಮಾತ್ರ ನನ್ನನ್ನೇ ಆರಾಧಿಸುತ್ತಾರೆ ಎಂದು" ಹೇಳಿದ್ದಾನೆ. ಅಷ್ಟೇಅಲ್ಲದೆ ರಾಜವಿದ್ಯಾ ರಾಜಗುಹ್ಯಾ ಯೋಗವೆಂಬ ಅಧ್ಯಾಯದಲ್ಲಿ 23ನೇ ಶ್ಲೋಕದಲ್ಲಿ ಈ ವಿಧವಾಗಿದೆ ನೋಡಿರಿ.

***ಶ್ಲೋ॥ ಯೇಪ್ಯನ್ಯ ದೇವತಾಭಕ್ತಾ ಯಜನ್ತೇ ಶ್ರದ್ಧಯಾನ್ವಿತಾಃ ।***
***ತೇಪಿ ಮಾಮೇವ ಕೌಂತೇಯ! ಯಜ್ಯನ್ತ್ಯ ವಿಧಿ ಪೂರ್ವಕಮ್॥***

**ಭಾವಾರ್ಥ :–** "ಯಾರು ಅನ್ಯದೇವತೆಗಳನ್ನು ಶ್ರದ್ಧೆಯಿಂದ ಪೂಜಿ ಸುತ್ತಿದ್ದಾನೋ ಅವನು ಕೂಡಾ ನನ್ನನ್ನೇ ಪೂಜಿಸಿದಂತಾಗುತ್ತದೆ. ಆದರೂ ಅವನು ಮಾರ್ಗವನ್ನು ಬಿಟ್ಟು ನಡೆದವನಾಗುತ್ತಿದ್ದಾನೆ". ಇಲ್ಲಿ ದೇವರು ಹೇಳಿದ ಮಾತುಗಳಲ್ಲೇ ಯಾರು ಇತರ ದೇವರನ್ನು ಅಥವಾ ದೇವತೆಗಳನ್ನು ಪೂಜಿಸಿದರೂ ಆ ದೇವತೆಗಳಲ್ಲಿಯೂ ಕೂಡಾ ವ್ಯಾಪಿಸಿರುವವನು ನಿಜವಾದ ದೇವರೇ ಆಗಿರುವುದರಿಂದ ಪೂಜಿ ಸುವವನ ಪೂಜೆ ನಿಜವಾದ ದೇವರಿಗೇ ಸಲ್ಲುತ್ತದೆ. ಆದರೂ ಅವನ ಉದ್ದೇಶದಲ್ಲಿ

ಭಕ್ತಿ ಭಾವವು ಬೇರೆ ದೇವತೆಗಳ ಮೇಲೆ ಇರುವುದರಿಂದ, ನಿಜವಾದ ದೇವರ ಮೇಲೆ ಇಲ್ಲದಿರುವುದರಿಂದ, ಅವನು ದಾರಿತಪ್ಪಿದವನಾಗಿ ದೇವರನ್ನು ಸೇರಲಾರನು. ಭಗವದ್ಗೀತೆಯಲ್ಲಿ ಧರ್ಮಗಳನ್ನು ಕಾಪಾಡುವ ಸಲುವಾಗಿ ಹೇಳಿದ ಮಾತುಗಳಲ್ಲಿ ಇತರ ದೇವತೆಗಳನ್ನು ಆರಾಧಿಸಿದವನು ದಾರಿತಪ್ಪಿ ನಡೆದವನೆಂದೂ, ಬುದ್ಧಿಯಿಲ್ಲದವನೆಂದೂ, ದೇವರನ್ನು ಬಿಟ್ಟು ಅನ್ಯ ದೇವತೆಗಳನ್ನು ಆರಾಧಿಸುವುದು ಭಕ್ತಿಯಲ್ಲಿ ವ್ಯಭಿಚಾರವೆಂದು ಹೇಳಿದಾಗ ನಿಮ್ಮ ಮನೋಭಾವಗಳು ತಪ್ಪು ಎಂದು ತಿಳಿಯಲಿಲ್ಲವಾ! ದೇವರು ಭಗವದ್ಗೀತೆಯಲ್ಲಿ ದೇವತೆಗಳನ್ನು ಬೇರೆಮಾಡಿ, ತನ್ನನ್ನು ಮಾತ್ರ ಬೇರೆಯಾಗಿ ಪ್ರಕಟಿಸಿಕೊಂಡು ರಾಜವಿದ್ಯಾ ರಾಜಗುಹ್ಯಾ ಯೋಗವೆಂಬ ಅಧ್ಯಾಯದಲ್ಲಿ 25ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ.

***ಶ್ಲೋ॥ ಯಾನ್ತಿ ದೇವವ್ರತಾನ್ ದೇವಾನ್, ಪಿತೃನ್‌ಯಾನ್ತಿ ಪಿತೃವ್ರತಾಃ।***
***ಭೂತಾನಿ ಯಾನ್ತಿ ಭೂತೇಜ್ಯಾ ಯಾನ್ತಿ ಮದ್ಯೋಜಿ ನೋಪಿ ಮಾಮ್॥***

**ಭಾವವು :–** "ದೇವತೆಗಳನ್ನು ಪೂಜಿಸುವವರು ದೇವತೆಗಳನ್ನೇ ಹೊಂದುವರು. ಪಿತೃ ದೇವತೆಗಳಾದ ದೊಡ್ಡವರನ್ನು, ತಾಯಿತಂದೆಯರನ್ನು, ತಾತಮುತ್ತಾತರನ್ನು ಪೂಜಿಸುವವರು ಅವರಲ್ಲಿಯೇ ಸೇರಿಹೋಗುವರು. ಜೀವರಾಶಿಗಳಾದ ಪ್ರಾಣಿಗಳನ್ನು, ಹಾವುಗಳನ್ನು, ಗಿಡಗಳನ್ನು ಪೂಜಿಸುವವರು ಅವುಗಳಲ್ಲಿಯೇ ಬೆರೆತುಹೋಗುವರು. ನನ್ನನ್ನು ಪೂಜಿಸುವವನು ಮಾತ್ರ ನನ್ನಲ್ಲಿ ಐಕ್ಯವಾಗುವನು" ಎಂದು ದೇವರೇ ಹೇಳಿದ್ದಾನೆ ಅಲ್ಲವೇ! ಆಗ ಆ ವಿಧವಾಗಿ ಹೇಳಿರುವ ದೇವರು ಮನುಷ್ಯ ಒಳ್ಳೆಯ ಮಾರ್ಗದಲ್ಲಿ ನಡೆಯಬೇಕೆಂದೂ, ದೇವರನ್ನು ಹೊರತು ಇತರರನ್ನು ಪೂಜಿಸುವುದರಿಂದ ಅವನು ದೇವರನ್ನು ಸೇರಲಾರನೆಂದು ಹೇಳಿದ್ದಾನೆ ಅಲ್ಲವೇ! ಹಾಗಿರುವಾಗ ದೇವರಾದ ತನ್ನನ್ನು ಹೊರತು ಇತರ ದೇವತೆಗಳನ್ನು ಪೂಜಿಸಬಾರದೆಂದೇ ಅಲ್ಲವೆ ಹೇಳಿರುವುದು. ಆಗ ಕೃಷ್ಣನು ನಿಮ್ಮ ಮನೋಭಾವಗಳನ್ನು ಗಾಯಪಡಿಸಿದಂತೇನಾ! ಕೆಟ್ಟ ಮಾರ್ಗದಲ್ಲಿ ಹೋಗಬೇಡ ಒಳ್ಳೆಯ ಮಾರ್ಗದಲ್ಲಿ ಹೋಗೆಂದು ಹೇಳಿದವರ ಮಾತುಗಳು ಒಳ್ಳೆಯವಲ್ಲವಾ?

**ಸಮನ್ವಯಕರ್ತ :–** ಹೇತುವಾದನೆಯ ಪ್ರಕಾರ ಆತನು ಕೇಳಿದಕ್ಕೆ ನೀವು ಸಮಾಧಾನ ಹೇಳಿರಿ.

**ಹಿಂದೂ :–** ನಮಗೆ ಭಗವದ್ಗೀತೆ ಮುಖ್ಯವಲ್ಲ. ನಮಗೆ ಅದು ಪ್ರಮಾಣ ಗ್ರಂಥವೇ ಅಲ್ಲ. ಹಿಂದುಗಳಿಗೆ ನಾಲ್ಕು ವೇದಗಳು ಪ್ರಮಾಣ ಗ್ರಂಥಗಳು ಮೊದಲು ಹುಟ್ಟಿರುವ ವೇದಗಳು ಇರುವಾಗ ಹಿಂದೆ ಹುಟ್ಟಿರುವ ಭಗವದ್ಗೀತೆ ಯನ್ನು ಹೇಳಿಕೊಳ್ಳುವುದು ತಪ್ಪಾಗುವುದು. ವೇದಗಳಲ್ಲಿ ಸನಾತನ ಧರ್ಮವಿದೆ. ಹಿಂದೂಗಳಿಗೆ ಮುಖ್ಯವಾದ ವೇದಗಳಲ್ಲಿ ಸರ್ವ ದೇವತೆಗಳನ್ನು ಪೂಜಿಸಬಹು ದೆಂದು ಇದೆ. ಅದರ ಪ್ರಕಾರ ನಾನು ಒಂದು ಮೂರ್ತಿಯನ್ನು ದೇವರೆಂದು ಆರಾಧಿಸಿದರೇ ನಿಮಗೇನಾದರೂ ತೊಂದರೆಯಾ?

**ಹೇತುವಾದಿ :–** ನೀನು ಹಾಗೆ ಮಾಡುತ್ತೇನೆಂದರೇ ನನಗೇನು ತೊಂದರೆ? ದೊಡ್ಡಿಗೆ ಕುಳಿತುಕೊಂಡು ಮಲವಿಸರ್ಜನೆ ಮಾಡುತ್ತಾ ರೊಟ್ಟಿಯನ್ನು ತಿನ್ನುವುದು ಒಳ್ಳೆಯದಲ್ಲ ಎಂದು ಹೇಳಿದರೇ ನಿನ್ನಮಾತು ನಮಗೆ ಮುಖ್ಯವಲ್ಲ ನಾನು ಅದ್ದಿಕೊಂಡು ತಿನ್ನುತ್ತೇನಿ ನಿನಗೇನಾದರೂ ತೊಂದರೆಯಾ ಎಂದರೇ ನಮಗೇನು ತೊಂದರೆ ಆಗುತ್ತೆ? ಹಾಗೆ ಮಾಡುವುದರಿಂದ ನಿನಗೇ ರೋಗಗಳು ಬರುತ್ತವೆ, ನಿನಗೇ ತೊಂದರೆ ಆಗುತ್ತದೆ. ಯಾರ ಇಷ್ಟ ಅವರದು.

**ಸಮನ್ವಯ ಕರ್ತ :–** **"ಪೀ.ಕೆ"** ಸಿನಿಮಾದಲ್ಲಿ ಹಿಂದೂಗಳ ಮನೋಭಾವಗಳು ಗಾಯ ಗೊಳ್ಳುವಹಾಗೆ ಶಿವನ ವೇಷವನ್ನು ತೋರಿಸಿದ್ದಾರೆಂದು ಹಿಂದೂಗಳು ವಾದಿಸುತ್ತಿದ್ದಾರೆ. ಒಬ್ಬ ಮುಸ್ಲಿಮ್‌ಆಗಿ ಈ ವಿಷಯದಲ್ಲಿ ನೀವೇನು ಹೇಳುತ್ತೀರಾ?

**ಮುಸ್ಲಿಮ್ :–** ದೇವರನ್ನು ಹೀಯಾಳಿಸುವುದು ಯಾರದಾದರೂ ತಪ್ಪೇ ಆಗುತ್ತದೆ. ಆದರೆ ಇಲ್ಲಿ ಶಿವನು ದೇವರಾ? ಅನ್ನುವುದೇ ಇಲ್ಲಿ ಪ್ರಶ್ನೆಯಾಗಿದೆ. ಶಿವನು ದೇವರಾದರೇ ಸಿನಿಮಾ ತೆಗೆದವರದು ತಪ್ಪೇ ಎಂದು ಹೇಳಬಹುದು. ದೇವರ ಧರ್ಮದ ಪ್ರಕಾರ ನಮ್ಮ ಖುರಾನ್ ಗ್ರಂಥದಲ್ಲಿ ದೇವರು ಪ್ರತ್ಯಕ್ಷವಾಗಿ ಯಾರೊಂದಿಗೂ ಮಾತನಾಡುವುದಿಲ್ಲ. ಹಾಗೆಯೇ ಯಾರಿಗೂ ಕಾಣಿಸುವನಲ್ಲ

ಎಂದು ಇದೆ. ಹಿಂದೂಗಳ ಭಗವದ್ಗೀತೆಯಲ್ಲು ಕೂಡಾ "ರೂಪ, ನಾಮ, ಕ್ರಿಯೆಗಳಿಲ್ಲದವನು ದೇವರು" ಎಂದು ಇದೆ. ಹಾಗಿರುವಾಗ ಕಾಣಿಸುವ ಶಿವನು ದೇವರೇನಾ? ಎಂಬ ಪ್ರಶ್ನೆ ಬರಬಹುದು. ಕಾಣಿಸದವನು ದೇವರು ಆಗಿದ್ದಾಗ ಆತನನ್ನು ಯಾರೂ ಅವಮಾನಿಸಲಾರರು ಅಲ್ಲವೇ!

**ಹಿಂದೂ :–** ವೇದಗಳಲ್ಲಿ ಹೇಳಿದಹಾಗೆ ದೇವರು ಸರ್ವಧಾರಿ, ಸರ್ವವ್ಯಾಪಿ ಆಗಿರುವಾಗ ಯಾವ ರೂಪದಲ್ಲಿ ಎಲ್ಲಿಯಾದರೂ ಕಾಣಿಸಬಹುದೆಂದು ವೇದಗಳು ಘೋಷಿಸುತ್ತಿವೆ. ಆದ್ದರಿಂದ ಶಿವನನ್ನು ಕೆಲವರು ದೇವರೆಂದು ನಂಬುತ್ತಿದ್ದಾರೆ. ಕೆಲವರು ವಿಷ್ಣುವನ್ನು ದೇವರೆಂದು ನಂಬುತ್ತಿದ್ದಾರೆ. ನಮ್ಮ ಭಾವನೆಗಳ ಪ್ರಕಾರ ಶಿವನನ್ನು ದೇವರೆಂದು ನಂಬುತ್ತಿದ್ದೇವೆ. ಹಾಗಿರುವಾಗ ನಾವು ದೇವರೆಂದು ನಂಬಿದ ಶಿವನನ್ನು ಸಿನಿಮಾದಲ್ಲಿ ತೋರಿಸಿ ಆತನನ್ನು ಪ್ರಶ್ನಿಸುವುದು, ಆತನು ಉತ್ತರ ಹೇಳಲಾರದೆ ಓಡಿಹೋದಹಾಗೆ ತೋರಿಸಿರುವುದು ಹಿಂದೂಗಳನ್ನು ಅವಮಾನ ಪಡಿಸಿದಂತೆ ಅಲ್ಲವಾ! ಒಂದು ಹಿಂದೂ ದೇವರುಗಳು ಹೊರತು ಇತರ ಮತಗಳ ದೇವರುಗಳ ವಿಷಯಕ್ಕೆ ಯಾಕೆ ಹೋಗಲಿಲ್ಲ? ಹಿಂದೂಗಳ ದೇವರುಗಳನ್ನು ತೋರಿಸಿದಂತೆಯೇ ಇತರ ಮತಗಳ ದೇವರುಗಳನ್ನು ಸಹ ತೋರಿಸಬಹುದು ಅಲ್ಲವೇ!

**ಮುಸ್ಲಿಮ್:–** ನಮ್ಮ ಮತದಲ್ಲಿ ದೇವರುಗಳಿಲ್ಲ ಇರುವುದು ಒಬ್ಬನೇ ದೇವರು. ಆತನು ಕಾಣಿಸುವವನಲ್ಲ. ಆದ್ದರಿಂದ ನಮ್ಮ ದೇವರನ್ನು ಸಿನಿಮಾದಲ್ಲಿ ತೋರಿಸಲಾರರು. ನನಗೆ ತಿಳಿಯದೆ ಒಂದು ಪ್ರಶ್ನೆ ಕೇಳುತ್ತೇನೆ. ನಮ್ಮ ದೇವರನ್ನು ತೋರಿಸಿ ಅವಮಾನ ಮಾಡಿದ್ದಾರೆ ಅನ್ನುತ್ತೀಯಲ್ಲವೇ! ನಿಮ್ಮ ದೇವರನ್ನು ತೋರಿಸಿ ಸಿನಿಮಾ ತೆಗೆದಿರುವುದು ನಿಮ್ಮ ಹಿಂದೂವೇ ಅಲ್ಲವೇ! ಇತರ ಮತಸ್ಥರು ಯಾರೂ ನಿಮ್ಮನ್ನು ಅವಮಾನ ಮಾಡಲಿಲ್ಲ ಅಲ್ಲವೇ!

**ಹೇತುವಾದಿ:–** ನಾನು ಹೇತುವಾದಿ, ಎಲ್ಲ ಮತಗಳು ನನಗೆ ಸಮಾನವೇ. ಸಿನಿಮಾದಲ್ಲಿ ಹೀರೋ ಪ್ರಶ್ನೆಗೆ ಉತ್ತರ ಸಿಗದಿರುವಾಗ, ದೇವರೇ ಉತ್ತರ ಹೇಳಬೇಕು ಎಂಬ ನಿರ್ಣಯದಿಂದ ಇರುವಾಗ, ಶಿವನ ವೇಷದಲ್ಲಿ ಇರುವ

ವ್ಯಕ್ತಿ ಕಾಣಿಸಿದರೇ ಆತನು ವೇಷಧಾರಿ ಎಂದು ತಿಳಿಯದೆ, ಆತನೇ ನಿಜವಾದ ದೇವರೆಂದು ನಂಬಿ ಶಿವನನ್ನು ಪ್ರಶ್ನಿಸಿದರೇ ಆತನು ಉತ್ತರ ಹೇಳಲಾರದೆ ಓಡಿಹೋದನು. ಹೀರೋ ಗ್ರಹಾಂತರವಾಸಿ ಆಗಿರುವುದರಿಂದ ಯಾರು ಮನುಷ್ಯ? ಯಾರು ದೇವರು? ಎಂದು ತಿಳಿಯದೆ ಮನುಷ್ಯನನ್ನು ದೇವರೆಂದು ನಂಬಿ ಪ್ರಶ್ನಿಸುವುದು ತಪ್ಪಲ್ಲ ಆದರೆ ನಿಜವಾದ ತಪ್ಪು ಎಲ್ಲಾ ತಿಳಿದ ಹಿಂದೂಗಳೇ ಮಾಡುತ್ತಿದ್ದಾರೆ. ನಿಲ್ಲಿಸಿ ಪ್ರಶ್ನಿಸುವುದೇ ತಪ್ಪಾದರೇ ಅದಕ್ಕಿಂತಲೂ ದೊಡ್ಡ ತಪ್ಪು ಹಿಂದೂಗಳೇ ಮಾಡುತ್ತಿದ್ದಾರೆ. ಅಷ್ಟೇ ಅಲ್ಲದೆ ಹಿಂದೂಗಳೇ ಅವರ ದೇವತೆಗಳನ್ನು ಅವರು ತಮಗೆ ತಿಳಿಯದೇ ಅವಮಾನಿಸುತ್ತಿದ್ದಾರೆ. ಮಾಡಬಾರದ ತಪ್ಪು ಮೊದಲು ಹಿಂದೂಗಳೇ ಮಾಡುತ್ತಾ ಇತರರನ್ನು ನೆಪಕ್ಕೆ ತೋರಿಸುವುದು ಒಳ್ಳೆಯದಲ್ಲ. ದೊಡ್ಡದಾಗಿ ತಮ್ಮ ದೇವರುಗಳೆಂದು ಹೇಳಿಕೊಳ್ಳುವ ದೇವತೆಗಳನ್ನು ಹೋಲಿದ ವೇಷಗಳು ಧರಿಸುವುದೇ ಹಿಂದೂಗಳು ಮಾಡುತ್ತಿರುವ ಮೊದಲ ತಪ್ಪು. ದೇವತೆಗಳ ವೇಷ ಧರಿಸುವುದೇ ತಪ್ಪಾದರೇ, ಅವರ (ದೇವತೆಗಳ) ವೇಷಗಳಲ್ಲಿ ಬೀದಿಯಲ್ಲಿ ಮನುಷ್ಯರ ಮುಂದೆ ಹಣ ಭಿಕ್ಷೆ ಬೇಡುವುದು ಇನ್ನೂ ದೊಡ್ಡ ತಪ್ಪಾಗುವುದು. ನಾನು ನೋಡಿರುವ ದೃಶ್ಯದಲ್ಲಿ ಸೀತಾ, ರಾಮನು, ಆಂಜನೇಯನು ಮತ್ತು ಅರ್ಧನಾರೀಶ್ವರನು ವೇಷಗಳನ್ನು ಧರಿಸಿ, ನಿಜವಾಗಿ ಅವರೇ ಬಂದಿರುವಂತೆ ಮೇಕಪ್ ಮಾಡಿಕೊಂಡು, ಹಗಲು ವೇಷಗಾರರೆಂದು ಹೇಳಿಕೊಳ್ಳುತ್ತಾ ಬೀದಿಗಳಲ್ಲಿ ಅಂಗಡಿ ಅಂಗಡಿ ತಿರುಗುತ್ತಾ ಹಣ ಭಿಕ್ಷೆಬೇಡುವುದನ್ನು ಪ್ರತ್ಯಕ್ಷವಾಗಿ ನೋಡಿದ್ದೇನೆ. ಒಂದೊಂದು ದಿನ ಒಂದೊಂದು ದೇವತೆಯ ವೇಷಗಳಲ್ಲಿ ಮೂರು ಅಥವಾ ನಾಲ್ಕು ದಿನಗಳು ವರಸೆಯಾಗಿ ಭಿಕ್ಷೆಬೇಡುವುದನ್ನು ನೋಡಿದ ನಂತರ ಹಿಂದೂಗಳ ಲೆಕ್ಕದಲ್ಲಿ ದೇವತೆಗಳು ಪವಿತ್ರರಾ? ಅಪವಿತ್ರರಾ? ಎಂಬ ಅನುಮಾನ ಬಂದಿದೆ. ನಾನೂ ಹಿಂದೂವೇ ಆಗಿರುವುದರಿಂದ ಹೇತುವಾದಿಯಾದ ನನಗೇ ಆ ದೃಶ್ಯ ಇಷ್ಟವಾಗಲಿಲ್ಲ.

ಈ ದಿನ ಎಷ್ಟೋ ಬಾಧೆಪಟ್ಟು ನಮ್ಮ ಮನೋಭಾವಗಳು ಗಾಯಗೊಂಡಿದೆ ಎನ್ನುವವರು, ದೇವತೆಗಳನ್ನು ಬೀದಿಯಲ್ಲಿ ತಿರುಗಿಸಿ

ಭಿಕ್ಷೆಬೇಡುವಂತೆ ಮಾಡಿದರೇ ಆಗ ಮನೋಭಾವಗಳು ಗಾಯಗೊಳ್ಳಲಿಲ್ಲವಾ? ಈ ದಿನ ಸಿನಿಮಾದಲ್ಲಿ ಕಾಣಿಸಿದರೇ ಹಿಂದೂಗಳನ್ನು ಹೀಯಾಳಿಸಿರುವರೆಂದು ಹೇಳಿರುವವರು, ಆ ದಿನ ಬೀದಿಗಳಲ್ಲಿ ಭಿಕ್ಷೆಬೇಡುವುದನ್ನು ನೋಡಿದಾಗ ಆಗ ಅವರನ್ನು ಯಾಕೆ ಕೇಳಲಿಲ್ಲ? ಹಿಂದೂ ದೇವತೆಗಳ ವೇಷಗಳು ಹಾಕಿರುವುದು ಹಿಂದೂಗಳೇ ಅಲ್ಲವೇ! ಆಗ ಇಲ್ಲದ ಅವಮಾನ ಸಿನಿಮಾದಲ್ಲಿ ಕಾಣಿಸಿದಾಗಲೇ ಬಂದಿದೆಯಾ! ಹಿಂದೂಗಳು ಶಿವನ ವೇಷಧಾರಣೆಯಲ್ಲಿ ಬೀದಿಯಲ್ಲಿ ಅಂಗಡಿಗಳ ಮುಂದೆ ನಾಟ್ಯವಾಡಿ ಹಣ ಭಿಕ್ಷೆ ಬೇಡಿದ ದಿನ ಅದನ್ನು ಖಂಡಿಸಿದ್ದರೆ, ಈಗ ನೀವು ಮಾತನಾಡುವ ಮಾತಿಗೆ ಬೆಲೆ ಇರುತ್ತಿತ್ತು. ಬೀದಿಯಲ್ಲಿ ಶಿವನ, ರಾಮನ, ಆಂಜನೇಯನ ವೇಷವನ್ನು ನೋಡಿದ ದಿನ ಏನು ಮಾತನಾಡದೆ ಈ ದಿನ ಮಾತನಾಡುವುದು ಸರಿಯೆನ್ನುತ್ತೀರಾ?

**ಸಮನ್ವಯ ಕರ್ತ :–** ಹಿಂದೂಗಳು ಮಡುತ್ತಿರುವ ತಪ್ಪನ್ನು ಕುರಿತು ಚರ್ಚಿಸುತ್ತಿಲ್ಲ. ಒಂದು ಸಿನಿಮಾದಲ್ಲಿ ಬಂದ ಅಭ್ಯಂತರಗಳನ್ನು ಕುರಿತು ನೀವೇನು ಅನ್ನುತ್ತೀರಾ? ಅದಕ್ಕೆ ಉತ್ತರ ಹೇಳಬೇಕೆನ್ನುತ್ತಿದ್ದೇನೆ.

**ಹೇತುವಾದಿ :–** ನಾವು ಚಿಕ್ಕಂದಿನಿಂದಲು ಪ್ರತಿ ವಿಷಯವನ್ನು ಪ್ರಶ್ನಿಸಿ ಕೇಳಿ ತಿಳಿದುಕೊಳ್ಳುತ್ತಾ ಇಂದಿಗೆ ಸ್ವಲ್ಪ ಪರಿಜ್ಞಾನ ಇರುವವರಾಗಿದ್ದೇವೆ. ಪ್ರಶ್ನೆಯಿಲ್ಲದೇ ಯಾವ ಮನುಷ್ಯನಿಗೂ ಮನುಗಡೆಯೇ ಇಲ್ಲ. ಪ್ರಶ್ನಿಸಿದಾಗಲೇ ಯಾವುದಕ್ಕಾದರೂ ಉತ್ತರ ದೊರೆಯುವುದು. ಸಿನಿಮಾದಲ್ಲಿರುವುದು ಪ್ರಶ್ನೆಯೇ ಆದಕಾರಣ ಅದರಲ್ಲಿ ಏನೂ ತಪ್ಪಿಲ್ಲ. ಗಾಂಧೀ ಬೊಂಬೆಯಿರುವ ಕಾಗದವನ್ನು ನೋಡಿ ದುಡ್ಡಿನಂತೆ ಭಾವಿಸಿಕೊಂಡ ವ್ಯಕ್ತಿ ಶಿವನ ವೇಷವನ್ನು ನೋಡಿ ಶಿವನಾಗಿ ಭಾವಿಸಿಕೊಂಡು ದೇವರೇ ಉತ್ತರ ಹೇಳಬಲ್ಲನೆಂಬ ಉದ್ದೇಶದಿಂದ ಎಲ್ಲಿ ಸಿಕ್ಕರೆ ಅಲ್ಲೇ ಕೇಳಿದ್ದಾನೆ. ವಾಸ್ತವವಾಗಿ ಅದರಲ್ಲಿ ಏನೂ ತಪ್ಪಿಲ್ಲ ಆದರೆ, ತಮ್ಮ ಇರುವಿಕೆಯನ್ನು ಪ್ರಕಟಿಸಿಕೊಳ್ಳುವುದಕ್ಕೇ ಯಾವ ಗುರುತುಯಿಲ್ಲದವರು ತಾವು ಗುರುತಿಗೆ ಬರಬೇಕೆಂದು ಮಾಡುತ್ತಿರುವ ಕಾರ್ಯವಿಧಾನ ಹೊರತು ಬೇರೆಯಾಗಿ ಈ ಅಂದೋಳನೆಯನ್ನು ನೋಡಬಾರದು. ನೀವು ಚೆನ್ನಾಗಿ ನೆನಪಿಟ್ಟುಕೊಳ್ಳಿ

ಹಿಂದೂಗಳಲ್ಲಿ ಮುಖ್ಯವಾಗಿರುವವರು ಯಾರೂ ಈ ಸಿನಿಮಾ ಕುರಿತು ತಪ್ಪಾಗಿ ಮಾತನಾಡಲಿಲ್ಲ. ಬಿ.ಜೆ.ಪಿ ನಾಯಕರಲ್ಲಿ ಅಗ್ರನಾಯಕನಾದ ಲಾಲ್‌ಕಿಷನ್ ಅದ್ವಾನೀಯವರು ಈ ಸಿನಿಮಾ ಕುರಿತು ವಿಶೇಷವಾಗಿ ಹೇಳಿದ್ದಾರೆ. ಆಧ್ಯಾತ್ಮಿಕ ಸ್ವಾಮೀಜಿಗಳಲ್ಲಿ ದೊಡ್ಡವನಾದ ಅಗ್ನಿವೇಷ್ ಸ್ವಾಮೀಜಿ ಈ ಸಿನಿಮಾಗೆ ಸರ್ಕಾರ ಟ್ಯಾಕ್ಸ್ ರದ್ದು ಮಾಡಿ ಕಡಿಮೆ ರೇಟು ಟಿಕೆಟ್ಟಿನಿಂದ ಎಲ್ಲರೂ ನೋಡುವಂತೆ ಮಾಡಬೇಕೆಂದು ಕೋರಿದನು. ಅಷ್ಟೇ ಅಲ್ಲದೆ ಹತ್ತುದಿನಗಳಲ್ಲಿ ಹಿಂದೂಗಳಾಗಿ ಇರುವವರು ಹೆಚ್ಚಾಗಿ ನೋಡುವುದರಿಂದ ಯಾವ ಸಿನಿಮಾ ವಸೂಲು ಮಾಡದಷ್ಟು ಹಣ ವಸೂಲು ಮಾಡಿದೆ. ಕೇವಲ ಹತ್ತುದಿನಗಳಲ್ಲಿ 100 ಕೋಟಿ ಹಣವನ್ನು ವಸೂಲು ಮಾಡಿದ ಮೊದಲ ಸಿನಿಮಾ ಆಗಿ ನಿಂತಿದೆ. ಇದನ್ನೆಲ್ಲವನ್ನು ಗಮನಿಸಿದರೆ ಎಲ್ಲರಿಗೂ ಕಾಣಿಸದ ತಪ್ಪು ಕೆಲವರಿಗೇ ಕಾಣಿಸಿದೆಯೆಂದು, ಈ ಆಂದೋಳನೆ ಒಂದು ಕುತಂತ್ರವೆಂದು ನಾನು ಹೇಳುತ್ತಿದ್ದೇನೆ.

ಈ ವಿಧವಾಗಿ ಒಂದು ಚರ್ಚಾ ವೇದಿಕೆ ಮುಗಿಯಿತು. ನಂತರ ಹತ್ತು ಇಲ್ಲವೆ ಹದಿನೈದು ದಿನಗಳಿಗೇ ಎಲ್ಲ ಟೀ.ವೀ ಚಾನಲ್‌ಗಳಲ್ಲಿ ಷಿರಿಡಿಸಾಯಿಬಾಬಾ ಹಿಂದುವೇ ಅಲ್ಲ ಎಂಬ ಚರ್ಚೆ ಮೊದಲಾಯಿತು. ಉತ್ತರ ದೇಶದಲ್ಲಿ ಒಬ್ಬ ದೊಡ್ಡ ಸ್ವಾಮೀಜಿ ಷಿರಿಡೀ ಸಾಯಿಬಾಬಾ ಒಬ್ಬ ಮುಸ್ಲಿಮ್ ವ್ಯಕ್ತಿಯಾದ್ದರಿಂದ ಆತನನ್ನು ಹಿಂದೂ ದೇವಾಲಯಗಳಲ್ಲಿ ಇಟ್ಟುಕೊಳ್ಳ ಬಾರದೆಂದು, ಆತನು ಹಿಂದೂ ದೇವರೇ ಅಲ್ಲವೆಂದು ಷಿರಿಡೀ ಸಾಯಿ ಪ್ರತಿಮೆಯನ್ನು ದೇವಾಲಯಗಳಿಂದ ಹೊರಗೆ ಇಡಬೇಕೆಂದು ಹೇಳುವುದು ಒಂದು ದೊಡ್ಡ ಸಂಚಲನವಾಯಿತು. ಈ ವಿಷಯದ ಮೇಲೆ ಹಲವು ಜನರು ಹಲವು ವಿಧಗಳಲ್ಲಿ ವಾದ ವಿವಾದ ಮಂಡನೆ ನಡೆಸಿದರು. ಅನೇಕ ವಿಧಗಳಾಗಿ ಅವರ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ನಾವು ನೋಡಿದ ಚರ್ಚಾ ವೇದಿಕೆಯಲ್ಲಿ ಸಾಯಿ ಭಕ್ತರು ಒಬ್ಬರಿದ್ದರೇ, ಸಾಯಿಬಾಬಾಗೆ ವಿರುದ್ಧವಾಗಿ ಮಾತನಾಡಿದ ಸ್ವಾಮಿಯವರ ಶಿಷ್ಯರು ಮತ್ತೊಬ್ಬರಿದ್ದಾರೆ. ಹೇತುವಾದ ಸಂಘಕ್ಕೆ ಸಂಬಂಧಿಸಿದ ವ್ಯಕ್ತಿ ಒಬ್ಬರಿದ್ದಾರೆ. ಟೀ.ವೀ ಚಾನಲ್‌ರವರು ಒಬ್ಬರಿದ್ದಾರೆ.

**ಚಾನಲ್‌ಅವರು:–** ಈದಿನ ದೇಶದಲ್ಲಿ ಎಷ್ಟೋ ಭಕ್ತರ ವಿಶ್ವಾಸಕ್ಕೆ ವಿರುದ್ಧವಾಗಿ ಒಬ್ಬ ಸ್ವಾಮೀಜಿ ಷಿರಿಡೀಸಾಯಿ ದೇವರು ಅಲ್ಲ. ಆತನು ಒಬ್ಬ ಮುಸ್ಲಿಮ್ ವ್ಯಕ್ತಿ. ಆತನನ್ನು ಹಿಂದೂಗಳ ಗುಡಿಗಳಲ್ಲಿ ಇಡಬಾರದು. ಹಿಂದೂಗಳು ಪೂಜಿಸಬಾರದು ಎಂದು ಮಾಡಿರುವ ವಾಕ್ಯಗಳಿಗೆ ಬಹಳಜನ ಷಿರಿಡೀಸಾಯಿ ಭಕ್ತರಿಂದ ಆಕ್ಷೇಪಣೆ ಬಂದಿತು. ಈ ವಿಷಯವಾಗಿ ಇಲ್ಲಿ ಚರ್ಚೆಯಲ್ಲಿ ಭಾಗವಹಿಸಿದವರು ತಮ್ಮ ಅಭಿಪ್ರಾಯಗಳನ್ನು ತಿಳಿಸಬೇಕಾಗಿ ಕೋರುತ್ತಿದ್ದೇವೆ. ಮೊದಲನೆಯದಾಗಿ ಈ ವಿಷಯವಾಗಿ ಸಾಯಿ ಭಕ್ತರನ್ನು ಕೇಳುತ್ತಿದ್ದೇವೆ. ಇದನ್ನು ಕುರಿತು ನೀವು ಏನನ್ನುತ್ತಿದ್ದೀರಾ?

**ಸಾಯಿಭಕ್ತರು:–** ಸಾಯಿಬಾಬಾ ದೇವರೆಂದು ನಂಬಿದವರು ಎಷ್ಟೋ ಕುಲಮತ ರಹಿತವಾಗಿ ದೇಶ ವ್ಯಾಪ್ತವಾಗಿ ಭಕ್ತರಿದ್ದಾರೆ. ಎಷ್ಟೋ ಕಡೆ ಗುಡಿಕಟ್ಟಿ ಪೂಜಿಸುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ಸಾಯಿ ದೇವರಲ್ಲ ಎಂದು ಒಬ್ಬ ಸ್ವಾಮೀಜಿ ಅನ್ನುವುದರಿಂದ ದೇಶ ವ್ಯಾಪ್ತವಾಗಿರುವ ಸಾಯಿ ಭಕ್ತರೆಲ್ಲರೂ ದುಃಖಪಡಬೇಕಾಗಿ ಬಂದಿದೆ. ಸಾಯಿಗೆ ನಡೆಯುವ ವೈಭವವನ್ನು ನೋಡಿ ಸಹಿಸಲಾರದೇ ಈ ವಿಧವಾಗಿ ಕೆಲವರನ್ನುತ್ತಿದ್ದಾರೆಂದು ನಾವು ಅಂದು ಕೊಳ್ಳುತ್ತಿದ್ದೇವೆ. ಸಾಯಿಬಾಬಾಗಿರುವ ಗೌರವವು ತಮಗೆ ಇಲ್ಲವೆಂಬ ಅಸೂಯೆ ಹೊರತು ಇದರಲ್ಲಿ ಏನೂ ಇಲ್ಲವೆಂದು ತಿಳಿಯುತ್ತಿದೆ.

**ಸ್ವಾಮಿಭಕ್ತರು:–** ಪ್ರಜೆಗಳು ಸಾಯಿಬಾಬಾ ಮಹತ್ವಗಳನ್ನು ನೋಡಿ ಆತನಕಡೆ ಹೋಗಿ ಆತನಿಗೆ ಕೆಲವರು ಭಕ್ತರರಾದ ಮಾತು ವಾಸ್ತವವೇ ಆದರೂ ಆತನಲ್ಲಿ ದೈವತ್ವವಿಲ್ಲವೆಂದು ಪ್ರಜೆಗಳಿಗೆ ತಿಳಿದಿಲ್ಲ. ಆತನು ಮಾಡುವ ಮಹತ್ವಗಳು ಮಾತ್ರ ಅವರಿಗೆ ಕಾಣಿಸಿವೆಯೇ ಹೊರತು, ಆತನು ಸಾಧಾರಣ ಮನುಷ್ಯನೇ ಹೊರತು ದೇವರು ಅಲ್ಲವೆಂಬ ವಿಷಯವನ್ನು ಮರೆತುಹೋಗಿದ್ದಾರೆ.

**ಸಾಯಿಭಕ್ತರು:–** ಸಾಯಿ ಸಾಧಾರಣ ಮನುಷ್ಯ ಆಗಿರುವಾಗ, ಸಾಧಾರಣ ಮನುಷ್ಯ ದೇವರಲ್ಲ ಅಂದಾಗ, ರಾಮನು ಕೂಡಾ ದಶರಥನಿಗೆ ಹುಟ್ಟಿದ ಒಬ್ಬ

ಮನುಷ್ಯನೇ ಅಲ್ಲವೇ! ಎಲ್ಲರ ದೃಷ್ಠಿಯಲ್ಲಿ ಮನುಷ್ಯನಾದ ರಾಮನು ಹೇಗೆ ದೇವರಾಗಿದ್ದಾನೆ ಎಂದು ನಾವು ಕೇಳುತ್ತಿದ್ದೇವೆ. ಒಬ್ಬರಿಗೆ ಅನ್ವಯಿಸುವ ಸೂತ್ರವು ಮತ್ತೊಬ್ಬರಿಗೂ ಕೂಡಾ ಅನ್ವಯಿಸುತ್ತದೆ ಅಲ್ಲವೇ! ನಮ್ಮ ಸಾಯಿಬಾಬಾ ಎಷ್ಟೋ ಮಹತ್ವಗಳು ತೋರಿಸಿದ್ದಾನೆ. ರಾಮನು ಒಂದು ಮಹತ್ವವನ್ನು ಕೂಡಾ ಮಾಡಲಿಲ್ಲ ಅಲ್ಲವೇ! ರಾಮನು ಹಿಂದೂಗಳಿಗೆ ಮಾತ್ರವೇ ದೇವರಾದರೇ, ನಮ್ಮ ಸಾಯಿಬಾಬಾ ಹಿಂದೂಗಳಿಗೇ ಅಲ್ಲದೆ ಎಲ್ಲ ಮತಗಳವರಿಗು ದೇವರಾಗಿದ್ದಾನೆ. ಅದು ನೋಡಿ ಸಹಿಸಿಕೊಳ್ಳಲಾರದೇ ಕೆಲವರು ಸಾಯಿಯನ್ನು ದೇವರಲ್ಲ ಅನ್ನುತ್ತಿದ್ದಾರೆ ಹೊರತು ಎಲ್ಲರೂ ಅನ್ನುತ್ತಿಲ್ಲ. ಇಷ್ಟುಕಾಲ ಇಲ್ಲದಿರುವುದು ಈಗ ಈ ವಿಧವಾಗಿ ಮಾತನಾಡುತ್ತಿದ್ದಾರೆ ಎಂದರೇ ಇದು ಅಸೂಯೆ ಎಂದು ತಿಳಿದುಹೋಗುತ್ತಿದೆ.

**ಚಾನಲ್‌ಅವರು:–** ಇತ್ತ ಸಾಯಿಭಕ್ತರು, ಅತ್ತ ಸ್ವಾಮಿ ಭಕ್ತರ ವಾದಗಳನ್ನು ಕೇಳಿದ ನಂತರ ಹೇತುವಾದಿಯಾಗಿ ನೀವೇನು ಹೇಳುತ್ತೀರಾ?

**ಹೇತುವಾದಿ:–** ವಾಸ್ತವವಾಗಿ ಮನುಷ್ಯ ದೇವರಲ್ಲ ಎಂಬ ಸೂತ್ರದ ಪ್ರಕಾರ ಮನುಷ್ಯನಾಗಿರುವ ಯಾರೂ ದೇವರು ಆಗಲಾರನು. ಆದರೆ ದೇವರು ಮನುಷ್ಯನಾಗಿ ಬರಬಹುದು ಎಂಬ ಸೂತ್ರದ ಪ್ರಕಾರ, ದೇವರು ಮನುಷ್ಯನಾಗಿ ಬಂದು ದೇವರ ಜ್ಞಾನವನ್ನು ತಿಳಿಸುವನು. ದೇವರ ಜ್ಞಾನ ದೇವರಿಗೆ ಹೊರತುಪಡಿಸಿ ಯಾವ ಮಾನವನಿಗೂ ತಿಳಿಯದೆಂಬ ವಾಕ್ಯವಿರುವುದರಿಂದ, ದೇವರ ಜ್ಞಾನವನ್ನು ದೇವರೇ ಮನುಷ್ಯನಾಗಿ ಬಂದು ಹೇಳಬೇಕಾಗಿದೆ. ಆದ್ದರಿಂದ ದೇವರು ಮನುಷ್ಯನಾಗಿ ಬರಬಹುದು ಆದರೆ, ಮನುಷ್ಯ ಎಂದಿಗೂ ದೇವರಾಗುವುದಿಲ್ಲವೆಂದು ಹೇಳಬಹುದು. ದೇವರು ಮನುಷ್ಯನಾಗಿ ಬಂದರೇ ದೈವಜ್ಞಾನವನ್ನೇ ಹೇಳುವನು. ಆದಕಾರಣ ಯಾರನ್ನಾದರೂ ದೇವರು ಎಂದು ಹೇಳಿದಾಗ ಆತನು ದೈವ ಜ್ಞಾನವನ್ನು ಹೇಳುವನಾಗಿ ಮತ್ತು ಅಡಗಿಕೊಂಡಿರುವ ಧರ್ಮಗಳನ್ನು ತಿಳಿಸುವವನಾಗಿ ಇರಬೇಕು. ಸಾಯಿಬಾಬಾ ಆಗಲೀ, ರಾಮನಾಗಲೀ, ದೈವಜ್ಞಾನವನ್ನು ಹೇಳಲಿಲ್ಲ, ಆದಕಾರಣ ಅವರನ್ನು ಸಾಧಾರಣ ಮನುಷ್ಯರಾಗಿಯೇ ಲೆಕ್ಕಿಸಬೇಕು. ಆದರೇ ಅವರಲ್ಲಿರುವ ಪ್ರತ್ಯೇಕತೆಗಳಿಂದ

ಅವರು ಪೂಜ್ಯರಾಗಿ ಇರಬಹುದು ಆದರೆ ದೇವರುಗಳು ಎಂದು ಹೇಳುವುದಕ್ಕೆ ಸಾಧ್ಯವಿಲ್ಲ.

**ಸ್ವಾಮೀಜಿ ಭಕ್ತರು:–** ದೇವರೇ ಇಲ್ಲವೆಂದು ಹೇಳುವ ಹೇತುವಾದಿಗಳು, ದೇವರನ್ನೇ ನಂಬದ ಹೇತುವಾದಿಗಳು ಯಾರನ್ನೂ ದೇವರೆಂದು ಒಪ್ಪಿಕೊಳ್ಳುವುದಿಲ್ಲ. ಅಸಲಿಗೆ ದೇವರೇ ಇಲ್ಲವೆಂದು ಹೇಳುತ್ತಿರುತ್ತಾರೆ. ಅಷ್ಟೇಅಲ್ಲವೇ ನಿಮ್ಮ ವಾದ?

**ಹೇತುವಾದಿ:–** ನಾವು ಸೂತ್ರ ಬದ್ಧವಾಗಿ, ಹೇತುಬದ್ಧವಾಗಿ, ಶಾಸ್ತ್ರ ಬದ್ಧವಾಗಿ ಮಾತನಾಡುತ್ತೇವೆ ಹೊರತು ಎಲ್ಲವನ್ನು ಮೂರ್ಖವಾಗಿ ಖಂಡಿಸುತ್ತಾ ಹೋಗುವುದಿಲ್ಲ. ಹಾಗೆಯೇ ಎಲ್ಲವನ್ನೂ ಮೂರ್ಖವಾಗಿ ನಂಬುತ್ತಾ ಹೋಗುವುದಿಲ್ಲ. ಮನುಷ್ಯ ದೇವರಾಗುವುದಿಲ್ಲ ಆದರೆ, ದೇವರು ಮನುಷ್ಯನಾಗಿ ಬರಬಹುದೆಂದು ಹೇಳಿದ್ದೇವೆ. ಆ ಸೂತ್ರದ ಪ್ರಕಾರ ಮನುಷ್ಯನಾಗಿ ಬಂದಿರುವ ದೇವರು ತನ್ನ ಜ್ಞಾನವನ್ನು ಹೇಳುತ್ತಾನೆ ಹೊರತು ತನ್ನ ಜೀವನದಲ್ಲಿ ಯಾವುದಕ್ಕೂ ಪ್ರಾಧಾನ್ಯತೆ ಕೊಡುವುದಿಲ್ಲ. ಆ ಸೂತ್ರದ ಪ್ರಕಾರ ನಾವು ಎಲ್ಲರನ್ನು ದೇವರಲ್ಲವೆಂದು ಹೇಳಲಿಲ್ಲ. ಮನುಷ್ಯನಾಗಿ ಬಂದಿರುವ ದೇವರು ಕೃಷ್ಣನೆಂದು ನಾವು ಸಹಿತ ಹೇಳುತ್ತಿದ್ದೇವೆ. ಶಾಸ್ತ್ರವು ಕೂಡಾ ಶ್ರೀಕೃಷ್ಣನನ್ನು ದೇವರಾಗಿ ನಿರೂಪಿಸುತ್ತಿದೆ.

**ಚಾನಲ್‌ಅವರು:–** ಪ್ರಸ್ತುತವು ನಮ್ಮ ಚರ್ಚೆ ಸಾಯಿ ಹಿಂದೂ ದೇವರಲ್ಲ ಎನ್ನುತ್ತಿದ್ದಾರೆ. ಆ ವಿಷಯವಾಗಿ ಸಾಯಿ ಭಕ್ತರು ತಮ್ಮ ಅಭಿಪ್ರಾಯವನ್ನು ತಿಳಿಸಬೇಕಾಗಿ ಕೋರುತ್ತಿದ್ದೇವೆ.

**ಸಾಯಿ ಭಕ್ತರು:–** ಸಾಯಿ ದೇವರು ಆಗದಿದ್ದರೆ ದೊಡ್ಡ ಮಹತ್ವಗಳನ್ನು ಹೇಗೆ ತೋರಿಸಬಲ್ಲನು? ಆತನು ಜೀವನದಲ್ಲಿ ತೋರಿಸಿದ ಮಹತ್ವಗಳನ್ನು ಅನುಸರಿಸಿ ಷಿರಿಡೀಸಾಯಿ ದೇವರೇ ಎಂದು ನಾವು ಹೇಳುತ್ತಿದ್ದೇವೆ.

**ಸ್ವಾಮೀಜಿ ಭಕ್ತರು:–** ಷಿರಿಡೀಸಾಯಿ ನಾನು ದೇವರಲ್ಲವೆಂದು ಆತನೇ ಹೇಳಿದಹಾಗೆ, ಆತನ ಬಾಯಿಂದ ಅನೇಕಬಾರಿ “ಅಲ್ಲಾಮಾಲಿಕ್” ಅನ್ನುತ್ತಿದ್ದರು.

ಪ್ರಪಂಚಕ್ಕೆಲ್ಲ ದೇವರೇ ಯಜಮಾನ ಎಂದು ಅದರ ಅರ್ಥ. ತಾನು ದೇವರಾದರೇ ಅಲ್ಲಾನು ಕುರಿತು ಅಲ್ಲಾನೇ ಯಜಮಾನ ಎಂದು ಯಾಕೆ ಹೇಳುತ್ತಾನೆ? ಅಷ್ಟೇ ಅಲ್ಲದೆ ಆತನು ಒಬ್ಬ ಮುಸ್ಲಿಮ್ ಆಗಿ ಹುಟ್ಟಿ ಮುಸ್ಲಿಮ್ ಆಚರಣೆಗಳು ಆಚರಿಸುತ್ತಾ ಇರುತ್ತಿದ್ದನು, ಆತನು ಸಾಯುವವರೆಗು ಮುಸ್ಲಿಮ್‌ರು ಇಟ್ಟುಕೊಳ್ಳುವ ಗಡ್ಡವನ್ನೇ ಇಟ್ಟುಕೊಂಡಿದ್ದನು. ಅಲ್ಲಾನೇ ದೇವರೆಂದು ಅಲ್ಲಾಮಾಲೀಕ್ ಎಂದು ಹೇಳಿದ್ದಾನೆ. ಅಲ್ಲಾ ಎಂದರೇ ಮುಸ್ಲೀಮ್ ದೇವರು. ನಮ್ಮ ದೇವರು ಅಲ್ಲಾ ಎಂದು ಹೇಳುತ್ತಿದ್ದಾನೆ ಆದರೆ, ತಾನು ದೇವರೆಂದು ಹೇಳಲಿಲ್ಲ ಅಲ್ಲವೇ! ಹಾಗಿರುವಾಗ ಸಾಯಿಬಾಬಾನನ್ನು ದೇವರೆನ್ನುವುದು ತಪ್ಪಾಗುತ್ತದೆ.

**ಹೇತುವಾದಿ:–** ನೀವು ಯಾರು ಮಾತನಾಡಿದರೂ ಶಾಸ್ತ್ರವನ್ನು ಅನುಸರಿಸಿ ಮಾತನಾಡಿದರೇ ಚೆನ್ನಾಗಿರುತ್ತದೆ. ದೇವರ ವಿಷಯಗಳಿಗೆ ಪ್ರತ್ಯೇಕಿಸಿ ಒಂದು ಶಾಸ್ತ್ರವಿರುವುದು ಅಲ್ಲವೇ! ಶಾಸ್ತ್ರಬದ್ಧತೆಯಿಲ್ಲದ ಮಾತುಗಳನ್ನು ಮೇಧಾವಿಗಳು ಯಾರೂ ಒಪ್ಪಿಕೊಳ್ಳುವುದಿಲ್ಲ. ಅಲ್ಲಾ ಎಂದರೆ ಮುಸ್ಲೀಮ್‌ರ ದೇವರು ಎನ್ನುವುದು ಪೂರ್ತಿ ಅಶಾಸ್ತ್ರೀಯವಾದ ಮಾತಾಗುವುದು. ಒಂದು ವಸ್ತುವಿಗೆ ಕನ್ನಡ ಭಾಷೆಯಲ್ಲಿ ಒಂದು ಹೆಸರಿದ್ದರೇ, ಮತ್ತೊಂದು ಭಾಷೆಯಲ್ಲಿ ಮತ್ತೊಂದು ಹೆಸರಿರುತ್ತದೆ. ಭಾಷೆಯನ್ನು ಅನುಸರಿಸಿ ಹೆಸರು ಬದಲಾದರೂ ವಸ್ತುವೇನೋ ಒಂದೇ ಅಲ್ಲವೇ! ಹಾಗೆಯೇ ನೀರನ್ನು ಕನ್ನಡ ಭಾಷೆಯಲ್ಲಿ ನೀರು ಅನ್ನುತ್ತಿದ್ದೇವೆ. ಅದೇ ನೀರನ್ನು ಹಿಂದಿಯಲ್ಲಿ ಪಾನೀ ಅನ್ನುತ್ತಿದ್ದೇವೆ. ಇಂಗ್ಲೀಷ್ ಭಾಷೆಯೊಳಗೆ ಹೋಗಿ ನೋಡಿದರೆ ನೀರನ್ನೇ ವಾಟರ್ ಅನ್ನುತ್ತಿದ್ದೇವೆ. ಭಾಷೆಯಲ್ಲಿ ಹೆಸರು ಬದಲಾದಷ್ಟು ಮಾತ್ರಕ್ಕೆ ನೀರು ಬದಲಾಗಲಿಲ್ಲ ಅಲ್ಲವೇ! ಒಂದೇ ನೀರನ್ನು ಬೇರೆ ಬೇರೆ ಭಾಷೆಗಳಲ್ಲಿ ಬೇರೆಬೇರೆ ಹೆಸರುಗಳಿಂದ ಕರೆಯುತ್ತಿದ್ದೇವೆ. ಅದೇ ವಿಧವಾಗಿ ಒಂದೇ ದೇವರನ್ನು ಇಂಗ್ಲೀಷಿನಲ್ಲಿ ಗಾಡ್ ಎಂದು ಅನ್ನುತ್ತಿದ್ದೇವೆ. ಉರ್ದೂ, ಅರಬ್ಬೀ ಭಾಷೆಯಲ್ಲಿ ಅಲ್ಲಾ ಎನ್ನುತ್ತಿದ್ದೇವೆ. ಕನ್ನಡದಲ್ಲಿ ದೇವರು ಎನ್ನುತ್ತಿದ್ದೇವೆ. ನೀರನ್ನು ಬೇರೆಬೇರೆ ಭಾಷೆಗಳಲ್ಲಿ, ಬೇರೆಬೇರೆ ಹೆಸರುಗಳಿಂದ ಕರೆದರೂ ನೀರೇ ಆದಹಾಗೆ ದೇವರನ್ನು ಕೂಡಾ ಬೇರೆಬೇರೆ ಭಾಷೆಗಳಲ್ಲಿ,

ಬೇರೆಬೇರೆ ಹೆಸರುಗಳಿಂದ ಕರೆದರೂ ದೇವರು ಒಬ್ಬನೇ ಆಗುವನು. ಅಲ್ಲಾ ಎಂದರೆ ಮುಸ್ಲೀಮ್ ದೇವರೆಂದು ಅಂದುಕೊಂಡರೇ, ಪಾನೀ ಎಂದರೇ ಮುಸ್ಲೀಮ್‌ರ ನೀರು ಎಂದುಕೊಳ್ಳಬೇಕಾಗಿರುತ್ತದೆ. ನೀರಿನಲ್ಲಿ ಹಿಂದೂಗಳ ನೀರು ಮುಸ್ಲೀಮ್‌ರ ನೀರು ಬೇರೆಬೇರೆಯಾಗಿ ಇರದಂತೆ, ದೇವರು ಕೂಡಾ ಹಿಂದೂಗಳ ದೇವರು, ಮುಸ್ಲೀಮ್‌ರ ದೇವರು ಪ್ರತ್ಯೇಕವಾಗಿ ಇಲ್ಲ. ಪ್ರಪಂಚಕ್ಕೆಲ್ಲಾ ನೀರು ಒಂದೇ ಆದಂತೆ ಒಟ್ಟು ವಿಶ್ವಕ್ಕೆಲ್ಲಾ ದೇವರು ಒಬ್ಬನೇ ಇದ್ದಾನೆ. ಯಾರಾದರೂ ಈ ವಿಷಯವನ್ನು ಒಪ್ಪಿಕೊಳ್ಳಲೇಬೇಕು. ಹಾಗಲ್ಲದೇ ಅಲ್ಲಾ ಎಂದರೇ ಮುಸ್ಲೀಮ್ ದೇವರು ಅನ್ನುವುದು ಪೂರ್ತಿ ಅನಾಗರಿಕವಾಗುವುದು ಮತ್ತು ಪೂರ್ತಿ ಅಜ್ಞಾನವಾಗುವುದು.

ಈ ವಿಧವಾಗಿ ಎರಡು ಚರ್ಚಾವೇದಿಕೆಗಳು ದೇವರ ವಿಷಯವಾಗಿ ನೋಡಿದ ನಂತರ ಮತಗಳವರು ಹೇಳಿರುವುದೆಲ್ಲಾ ಪೂರ್ತಿ ತಪ್ಪೆಂದು ಹೇತುವಾದಿ ಹೇಳಿರುವುದು ಮಾತ್ರ ಸತ್ಯವೆಂದು ಅರ್ಥವಾಗಿದೆ. ಒಟ್ಟಾರೆ ಪ್ರಜೆಗಳನ್ನು ತಪ್ಪುದಾರಿ ಹಿಡಿಸಿ ತಮ್ಮ ಮೋಸವನ್ನು ಗುರುತಿಸದಂತೆ ಮಾಡುವುದಕ್ಕೆ ಮತವೆನ್ನುವುದನ್ನು ಚೆನ್ನಾಗಿ ಅಡ್ಡಇಟ್ಟುಕೊಂಡಿದ್ದಾರೆಂದು ತಿಳಿಯುತ್ತಿದೆ. ದೇಶದಲ್ಲಿ ದೊಡ್ಡ ಪ್ರಮಾಣದಲ್ಲಿ ಕುಂಭಕೋಣ ನಡೆದಾಗ ಅದರಮೇಲೆ ಯಾರೂ ದೃಷ್ಟಿ ಇಡದಿರುವುದಕ್ಕೆ ದೇಶದ ಸರಹದ್ದಿನಲ್ಲಿ ಯುದ್ಧ ಸನ್ನಾಹ (ಪೂರ್ವಸಿದ್ಧತೆ) ಗಳು ಮಾಡಿ ಸ್ವಲ್ಪ ಗುಂಡುಸಿಡಿಸುವುದು ನಡೆಸಿದರೆ ಯುದ್ಧ ನಡೆಯುತ್ತಿದೆಯೆಂದು ಪ್ರಜೆಗಳ ದೃಷ್ಟಿಯೆಲ್ಲಾ ಯುದ್ಧದ ಕಡೆಗೆ ಹೋಗುವುದು. ದೇಶದಲ್ಲಿ ಕೆಲವು ಸಮಸ್ಯೆಗಳನ್ನು ಮರೆಮಾಡುವುದಕ್ಕೆ ಸರ್ಕಾರವನ್ನು ನಡೆಸುತ್ತಿರುವ ರಾಜಕೀಯ ನಾಯಕರು ಮತ್ತೊಂದು ದೊಡ್ಡ ಸಮಸ್ಯೆಯನ್ನು ಸೃಷ್ಠಿಸಿ ಎಲ್ಲರ ದೃಷ್ಠಿಯನ್ನು ಪಕ್ಕಕ್ಕೆ ತಿರುಗಿಸುತ್ತಿರುತ್ತಾರೆ. ಅದೇ ವಿಧವಾಗಿ ಕೆಲವರು ಮತಹಿರಿಯರು ದೈವಜ್ಞಾನವನ್ನು ಕಬ್ಜಾಮಾಡಿ ಆ ವಿಷಯವನ್ನು ಯಾರೂ ಪತ್ತೆಮಾಡದಂತೆ ದೇಶ ಸರಹದ್ದಿನಲ್ಲಿ ಯುದ್ಧವಾತಾವರಣವನ್ನು ಸೃಷ್ಟಿಸಿದಂತೆ, ಮತದಲ್ಲಿ ಮತ ಘರ್ಷಣೆಗಳನ್ನು ಸೃಷ್ಠಿಸುತ್ತಿರುತ್ತಾರೆ. ಯುದ್ಧವಾತಾವರಣದಲ್ಲಿ ಎಲ್ಲರ ದೃಷ್ಟಿ

ಯುದ್ಧದ ಮೇಲೇ ಹೋದಂತೆ, ಮತಘರ್ಷಣೆಗಳಲ್ಲಿ ಎಲ್ಲರ ದೃಷ್ಟೀ ಮತದ ಮೇಲೇ ಹೋಗುವುದು. ಆ ವಿಧವಾಗಿ ಮತದಲ್ಲಿ ಆಸಕ್ತಿ ಹೊಂದಿರುವವರು ದೇವರು ಹೇಳಿದ ಜ್ಞಾನವನ್ನು ಕುರಿತು ಯೋಚಿಸದೆ ಮನುಷ್ಯರು ಹೇಳಿದ ಮತಗಳನ್ನು ಕುರಿತೇ ಆಲೋಚಿಸುತ್ತಾರೆ.

ಅದೇ ಉದ್ದೇಶದಿಂದಲೇ ಕೆಲವರು ಮತಹಿರಿಯರು ಅನವಶ್ಯಕತೆ ರಾದ್ಧಾಂತಗಳು ಸೃಷ್ಠಿಸಿ, ಪ್ರಜೆಗಳ ದೃಷ್ಠಿಯನ್ನು ಆ ರಾದ್ಧಾಂತಗಳ ಮೇಲಕ್ಕೆ ತಿರುಗಿಸುತ್ತಿರುತ್ತಾರೆ. ಚೆನ್ನಾಗಿ ಆಲೋಚಿಸಿದರೇ "ಪೀ.ಕೆ" ಸಿನಿಮಾ ವಿಷಯದಲ್ಲಿ ಇದೇ ನಡೆದಿದೆ. ಆಗಲೇ ಸಾಯಿಬಾಬಾ ವಿಷಯವು ಕೂಡಾ ಬೆಳಕಿಗೆ ಬಂದಿದೆ. ಈ ಎರಡು ವಿಷಯಗಳಲ್ಲಿಯೇ ಪ್ರಜೆಗಳು ಪೂರ್ತಿ ಲಗ್ನವಾಗಿ ಪ್ರಜೆಗಳು ಕೂಡಾ ಮತದ ಪರವಾಗಿ ಮಾತನಾಡುತ್ತಿದ್ದಾರೆ, ಹಾಗೆ ಮತದಲ್ಲಿ ಲಗ್ನವಾದವರಿಗೆ ದೈವಗ್ರಂಥಗಳಲ್ಲಿನ ಜ್ಞಾನ ಹೇಳಿದರೂ ಅದು ಅವರಿಗೆ ಮನಸ್ಸಿಗೆ ನಾಟುವುದಿಲ್ಲ. ಈ ವಿಧವಾಗಿ ಆಗಾಗ ಮತಘರ್ಷಣೆಗಳು ಬರುತ್ತಿರುವುದರಿಂದ, ಮನುಷ್ಯರಿಗೆ ಮತ ಬಿಟ್ಟು ದೇವರ ಜ್ಞಾನವು ತಿಳಿಯದೇ ಹೋಗಿದೆ. ಕೆಲವರು ಮತಹಿರಿಯರು ಪ್ರೇರೇಪಿಸಿದರೇ, ಕೆಲಸಕಾರ್ಯ ಇಲ್ಲದ ಮನುಷ್ಯರು ಕೆಲವರು ಅನವಶ್ಯವಾಗಿ ಮತಗಳ ವಿಷಯದಲ್ಲಿ ಕಿತ್ತಾಡುತ್ತಿರುತ್ತಾರೆ. ಕೆಲವುಕಡೆ ಕೆಲವು ಮತಘರ್ಷಣೆಗಳು ದೊಡ್ಡ ಯುದ್ಧವಾಗಿ ಬದಲಾಗಿ ಎಷ್ಟೋ ಜನರು ಪ್ರಾಣಗಳು ಕಳೆದುಕೊಂಡಿರುವ ಸಂಘಟನೆಗಳು ಕೂಡಾ ಇವೆ. ಇದೆಲ್ಲಾ ಜ್ಞಾನವನ್ನು ಕಬ್ಜಾ ಮಾಡಿದವರು ತಮ್ಮ ಅಧಿಕಾರವನ್ನು ಚಲಾಯಿಸುವುದಕ್ಕೆ ಮಾಡಿರುವುದೇ ಹೊರತು ಬೇರೆ ಏನೂ ಅಲ್ಲವೆಂದು ತಿಳಿಯಬೇಕು.

ಜ್ಞಾನವನ್ನು ಕಬ್ಜಾ ಮಾಡಿದವರು ನಿಜವಾದ ಜ್ಞಾನವನ್ನು ಮುಚ್ಚಿಹಾಕಿ ತಮ್ಮ ಸ್ವಂತ ಜ್ಞಾನವನ್ನು ಪ್ರಕಟಿಸಿಕೊಳ್ಳುತ್ತಿರುವರು. ತಮ್ಮ ಸ್ವಂತ ಜ್ಞಾನ ಪ್ರಚಾರವಾಗುವುದಕ್ಕೆ, ನಿಜವಾದ ದೈವಜ್ಞಾನ ಹೊರಗೆ ಬಾರದೆ ಇರುವುದಕ್ಕೆ, ತಮ್ಮ ಜ್ಞಾನಕ್ಕೆ ಒಂದು ಮತದ ಹೆಸರಾಗಲಿ, ಮತದಲ್ಲಿನ ಬಿರುಕುಗೊಂಡ ಹೆಸರಾಗಲಿ ಇಟ್ಟು ಪ್ರಚಾರ ಮಾಡುತ್ತಿರುತ್ತಾರೆ. ಆ ವಿಧವಾಗಿ ತಯಾರಿಯಾದ

ಮತಗಳು ಒಂಭತ್ತು ಇವೆ. ಭೂಮಿಮೇಲೆ ಒಟ್ಟು ಮತಗಳು ಹನ್ನೆರಡು ಇರುವಾಗ, ಅದರಲ್ಲಿ ಪೂರ್ತಿಯಾಗಿ ಮನುಷ್ಯರು ತಯಾರಿ ಮಾಡಿರುವ ಮತಗಳು ಒಂಭತ್ತು ಇವೆ. ದೇವರ ಕಡೆಯಿಂದ ಬಂದ ಒಂದೇ ಜ್ಞಾನವನ್ನು ಕೂಡಾ ಮನುಷ್ಯರು ತಮ್ಮ ಅಧಿಕಾರವನ್ನು ಚಲಾಯಿಸುವುದಕ್ಕೆ ಮೂರು ಮತಗಳಾಗಿ ಸೀಳಿಸಿ ಮೂರು ಹೆಸರುಗಳು ಇಟ್ಟಿದ್ದಾರೆ. ಅದರಿಂದ ಒಟ್ಟು ಹನ್ನೆರಡು ಮತಗಳಾಗಿ ಭೂಮಿಮೇಲೆ ಹೇಳಲಾಗುತ್ತಿವೆ. ಹೇಗೆ ಹೇಳಿಕೊಂಡರೂ ಹಿಂದೂ, ಇಸ್ಲಾಮ್, ಕ್ರೈಸ್ತವ ಎಂಬ ಮೂರು ಮತಗಳಿಗೆ ಮೂರು ಗ್ರಂಥಗಳಿವೆ. ಆ ಮೂರು ಗ್ರಂಥಗಳೇ ಭಗವದ್ಗೀತೆ, ಬೈಬಲ್, ಖುರಾನ್ ಎಂಬ ಹೆಸರುಗಳಿಂದ ಕರೆಯಲ್ಪಡುತ್ತಿವೆ. ವಾಸ್ತವವಾಗಿ ಮೂರು ಮತಗಳೆಂದೂ, ಮೂರು ಗ್ರಂಥಗಳೆಂದೂ ಹೇಳಲ್ಪಟ್ಟರೂ, ಮೂರು ಗ್ರಂಥಗಳಲ್ಲಿ ಒಂದೇ ದೇವರ ವಿಷಯವಿದೆ. ಆದಕಾರಣ ಅವುಗಳಿಗೆ ಪ್ರಥಮ ದೈವಗ್ರಂಥವೆಂದು, ಮಧ್ಯ ದೈವಗ್ರಂಥವೆಂದು, ಅಂತಿಮ ದೈವಗ್ರಂಥವೆಂದು ಹೆಸರುಗಳು ಇಡಲಾಗಿವೆ. ದೇವರು ಹೇಳಿದ ಜ್ಞಾನವೇ ದೈವಗ್ರಂಥಗಳಲ್ಲಿ ಇದೆ.

ಒಂಭತ್ತು ಮತಗಳ ಜ್ಞಾನವನ್ನು ಮನುಷ್ಯರೇ ಸ್ವಂತವಾಗಿ ಹೇಳಿಕೊಂಡಿದ್ದಾರೆ. ಆದಕಾರಣ ಅದು ಅವರ ಜ್ಞಾನವೇ. ದೇವರು ಹೇಳಿದ ಜ್ಞಾನ ಮಾತ್ರ ಅವರದಲ್ಲ. ಅವರದಲ್ಲದ್ದನ್ನು ಆಕ್ರಮಿಸಿದಾಗಲೇ ಕಬ್ಜಾ ಮಾಡಿದಂತಾಗುವುದು. ದೇವರು ಹೇಳಿದ ಜ್ಞಾನವನ್ನು ಮೂರು ಮತಗಳಲ್ಲಿನ ಹಿರಿಯರು ಕಬ್ಜಾ ಮಾಡಿದ್ದಾರೆ. ದೇವರ ಜ್ಞಾನವು ಖಾಲಿಯಾಗಿರುವ ಸ್ಥಳಕ್ಕೆ ಸಮಾನವಾಗಿದೆ. ಕಬ್ಜಾ ಮಾಡಲ್ಪಟ್ಟ ನಂತರ ಕಬ್ಜಾದಾರರು ಅವರ ಇಷ್ಟಬಂದ ಕಟ್ಟಡಗಳನ್ನು ಕಟ್ಟಿಕೊಂಡಹಾಗೆ, ಯಾವ ನಿಯಮ ನಿಬಂಧನೆಗಳು ಇಲ್ಲದ ಜ್ಞಾನಕ್ಕೆ ಅನೇಕ ನಿಯಮ ನಿಬಂಧನೆಗಳು ಏರ್ಪಡಿಸಿ ಅವನ್ನು ತಮ್ಮ ಸಾಂಪ್ರದಾಯಗಳು ಎನ್ನುತ್ತಿದ್ದಾರೆ. ದೇವರ ಜ್ಞಾನದಲ್ಲಿ ಸಾಂಪ್ರದಾಯಗಳು ಇಲ್ಲ, ದೇವರ ಹೆಸರಿನಲ್ಲಿ ಜ್ಞಾನವು ಹೇಳಲ್ಪಡುತ್ತಿದ್ದರೂ ಮತ ಎಂಬ ತಮ್ಮ ಸ್ವಂತ ಸಮ್ಮತಿ ಪೇಪರ್ ತೋರಿಸುತ್ತಿದ್ದಾರೆ. ದೇವರು ಹೇಳಿರುವ ಜ್ಞಾನಕ್ಕೆ ತಮ್ಮ ಆಧಿಪತ್ಯವನ್ನು ಜೋಡಿಸಿ

ಹಿಂದೂಮತದಲ್ಲಿ ದೇವರು ಹೇಳದ ಯಜ್ಞ,ಯಾಗಾದಿಗಳನ್ನೂ, ವೇದಾಧ್ಯಯನಗಳನ್ನೂ, ದಾನಗಳನ್ನೂ, ತಪಸ್ಸುಗಳನ್ನೂ ಸೇರಿಸಿ ಯಜ್ಞಯಾಗಗಳು, ವೇದಾಧ್ಯಯನಗಳು ತಪಸ್ಸುಗಳು ದಾನಗಳು ತಮ್ಮ ಸ್ವಂತವೆಂದು ತಮಗೇ ಸೇರುತ್ತವೆಂದೂ ಹೇಳುತ್ತಿರುತ್ತಾರೆ. ಭಗವದ್ಗೀತೆಯಲ್ಲಿನ ಜ್ಞಾನವು ಸೃಷ್ಠಿ ಆದಿಯಲ್ಲಿ ತಯಾರಾಗಿ ಬಂದಿರುವುದರಿಂದ ಕೃತ, ತ್ರೇತಾಯುಗಗಳಲ್ಲಿಯೇ ಜ್ಞಾನವು ಕಬ್ಜಾ ಮಾಡಲ್ಪಟ್ಟು ದೇವರ ಜ್ಞಾನವೆಂಬ ಸ್ಥಳದಲ್ಲಿ ಯಜ್ಞ, ದಾನ, ವೇದ, ತಪಸ್ಸುಗಳೆಂಬ ಕಟ್ಟಡಗಳನ್ನು ಕಟ್ಟಿಕೊಂಡಿದ್ದಾರೆ.

ಅದನ್ನು ಗಮನಿಸಿದ ದೇವರು ಧರ್ಮಗಳು ಅಧರ್ಮಗಳಾಗಿ ಬದಲಾಗಿ ಹೋಗಿವೆಯೆಂದು, ದೇವರ ಜ್ಞಾನದಲ್ಲಿ ಕಲುಷಿತ ಏರ್ಪಟ್ಟಿದೆಯೆಂದು, ದೇವರ ಜ್ಞಾನವು ಕೆಲವರಿಂದ ಕಬ್ಜಾ ಮಾಡಲ್ಪಟ್ಟು ತಮ್ಮ ಇಷ್ಟ ಬಂದಹಾಗೆ ನಾಲ್ಕು ಅಧರ್ಮಗಳನ್ನು ಜ್ಞಾನದೊಳಗೆ ಪ್ರವೇಶ ಇಟ್ಟಿದ್ದಾರೆಂದು ತಿಳಿದು, ತಿರುಗಿ ತನ್ನ ಸ್ವಚ್ಛವಾದ ಜ್ಞಾನವನ್ನು ಪ್ರಜೆಗಳಿಗೆ ತಿಳಿಸಬೇಕೆಂದುಕೊಂಡು, ದ್ವಾಪರಯುಗದ ಕೊನೆಯಲ್ಲಿ ಭಗವಂತನಾಗಿ ಬಂದು ಭಗವದ್ಗೀತೆಯನ್ನು ಹೇಳಿಹೋಗಿದ್ದಾನೆ. ದ್ವಾಪರಯುಗದಲ್ಲಿ ಹೇಳಿರುವ ಭಗವದ್ಗೀತೆಯಲ್ಲಿ ನಾಲ್ಕು ಅಧರ್ಮಗಳನ್ನು ಖಂಡಿಸಿ, ಮೂರು ಧರ್ಮಗಳನ್ನು ನೆಲೆಗೊಳಿಸಿ ಹೋಗಿದ್ದಾನೆ. ಈ ವಿಧವಾಗಿ ಕಬ್ಜಾ ಮಾಡಲ್ಪಟ್ಟಿರುವ ತನ್ನ ಜ್ಞಾನವೆಂಬ ಸ್ಥಳವನ್ನು ಶುಚಿಗೊಳಿಸಿ ಇವು ನನ್ನ ಕಟ್ಟಡಗಳು ಅಲ್ಲವೆಂದು ಹೇಳಿದರೂ, ಪ್ರಜೆಗಳು ಗ್ರಹಿಸಲಾರದೆ ಹೋಗಿದ್ದಾರೆ. ದೇವರ ಸಂದೇಶವನ್ನು ಜ್ಞಾನ ಕಬ್ಜಾದಾರರು ಪ್ರಜೆಗಳವರೆಗು ಬಾರದಂತೆ ಜಾಗ್ರತೆವಹಿಸಿದ್ದಾರೆ. ಆದ್ದರಿಂದ ಇಂದಿಗೂ ದೇವರ ಜ್ಞಾನದಲ್ಲಿ ನಾಲ್ಕು ಅಧರ್ಮಗಳು ಚೆನ್ನಾಗಿ ಕಾಣಿಸುತ್ತಿವೆ. ಮೂರು ಧರ್ಮಗಳು ಯಾರಿಗೂ ಕಾಣಿಸದೇ ಹೋಗಿವೆ. ಈದಿನ ಈ ವಿಷಯವೆಲ್ಲವನ್ನೂ ಗ್ರಹಿಸಿದ ನಾವು, ದೇವರು ಮನುಷ್ಯನಾಗಿ ಬಂದು ಹೇಳಿದ ಮಾತುಗಳು ವ್ಯರ್ಥವಾಗಬಾರದೆಂದು ತಿಳಿದು, ದೇವರ ಜ್ಞಾನವನ್ನು ಕಬ್ಜಾದಾರರಿಂದ ಬಿಡಿಸಿ ಪ್ರಜೆಗಳಿಗೆ ಕೊಡಬೇಕೆಂದು ಪ್ರಯತ್ನ ಮಾಡುತ್ತಿದ್ದೇವೆ.

ಇತರರು ಆಕ್ರಮಿಸಿಕೊಂಡಿರುವುದನ್ನು ತಿರುಗಿ ಪಡೆಯಬೇಕೆಂದರೆ ಎಷ್ಟು ಕಷ್ಟವಿರುತ್ತದೋ, ಹಾಗೆಯೇ ನಾವು ಮಾಡುವ ಪ್ರಯತ್ನಕ್ಕೆ ಎಷ್ಟೋ ಅಡಚಣೆಗಳು ಏರ್ಪಟ್ಟಿವೆ. ಜ್ಞಾನವನ್ನು ಆಕ್ರಮಿಸಿದವರು ನಮ್ಮನ್ನು ಪೂರ್ತಿ ವಿರೋಧಿಸುವುದೇ ಅಲ್ಲದೆ ನಾವು ಹೇಳುತ್ತಿರುವುದು ಹಿಂದೂ ಮತಕ್ಕೆ ಸಂಬಂಧಿಸಿರುವುದು ಅಲ್ಲವೆಂದು, ಹಿಂದೂ ಮುಸುಗಿನಲ್ಲಿ ಕ್ರೈಸ್ತವ ಮತವನ್ನು ಪ್ರಚಾರ ಮಾಡುತ್ತಿದ್ದೇವೆಂದು ಆರೋಪಿಸಿದ್ದಾರೆ. ನಾವು ಬರೆದಿರುವ "ತ್ರೈತ ಸಿದ್ಧಾಂತ ಭಗವದ್ಗೀತೆ"ಯನ್ನು ಬೈಬಲ್‌ಗೆ ಸಂಬಂಧಿಸಿರುವುದೆಂದು ಹೇಳಿದ್ದಾರೆ. ಎಷ್ಟೋ ಕಡೆ ಮತರಕ್ಷಣೆ ಎಂಬ ಹೆಸರಿಟ್ಟುಕೊಂಡು ನಮ್ಮ ಭಕ್ತರಮೇಲೆ ದಾಂದಲೆಗಳು ಕೂಡಾ ಮಾಡಿದ್ದಾರೆ. ಆದರೂ ಎಲ್ಲದಕ್ಕೂ ಸಹಿಸಿಕೊಂಡು ನಿಜವಾದ ದೈವಜ್ಞಾನವನ್ನು ಹೊರಗೆ ತರಬೇಕೆಂದುಕೊಂಡಿದ್ದೇವೆ. ಕಬ್ಜಾದಾರರಿಂದ ದೇವರ ಜ್ಞಾನವನ್ನು ಪೂರ್ತಿ ಬಿಡುಗಡೆ ಮಾಡಬೇಕೆಂದು ಕೊಂಡಿದ್ದೇವೆ. ಆ ವಿಧವಾಗಿ ನಾವು ಮಾಡುವ ಪ್ರಯತ್ನದಲ್ಲಿ ಈ ಚಿಕ್ಕ ಗ್ರಂಥವನ್ನು ಬರೆಯಲಾಗಿದೆ. ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ದೇವರೇ ಮಾಡಲಾಗದ ಕೆಲಸವನ್ನು ನೀವು ಮಾಡಬಲ್ಲಿರಾ? ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇರುವುದು. ದೇವರು ಮಾಡಲಾಗದ ಕೆಲಸವಂತೂ ಯಾವುದೂ ಇಲ್ಲ. ಆದರೂ ಸ್ವತಃವಾಗಿ ದೇವರು ಯಾವುದನ್ನೂ ಮಾಡುವುದಿಲ್ಲ. ದೇವರು ಯಾವುದನ್ನು ಅಂದುಕೊಂಡರೆ ಅದು ನಡೆಯುವಹಾಗೆ ಏರ್ಪಾಟು ಮಾಡುತ್ತಾನೆ. ಅಷ್ಟೇ ಹೊರತು ಸ್ವತಃವಾಗಿ ದೇವರಾಗಿ ತಾನು ಯಾವುದನ್ನೂ ಮಾಡುವುದಿಲ್ಲ. ದೇವರು ಕ್ರಿಯಾರಹಿತನು ಎಂಬ ಸೂತ್ರದ ಪ್ರಕಾರವಿರುವನು. ಭಗವಂತನು ಕ್ರಿಯಾಸಹಿತನು ಎಂಬ ಸೂತ್ರದ ಪ್ರಕಾರ ಕೆಲಸ ಮಾಡಬೇಕಾಗಿರುತ್ತದೆ. ಭಗವಂತನು ಮನುಷ್ಯನಾಗಿಯೇ ಬರುತ್ತಾನೆ. ದೇವರ ಜ್ಞಾನವು ದೇವರಿಗೇ ತಿಳಿಯುವುದೆಂಬ ದೈವಗ್ರಂಥದಲ್ಲಿನ ವಾಕ್ಯದ ಪ್ರಕಾರ ಮನುಷ್ಯನಾಗಿ ಬಂದಿರುವವನು ದೇವರೇ ಎಂದು ಹೇಳಬಹುದು. ಆದರೆ ಪದ್ಧತಿ ಪ್ರಕಾರ ಕಾಣಿಸುವ ಆಕಾರವಿರುವವನನ್ನು, ಪ್ರತ್ಯಕ್ಷವಾಗಿ ಮಾತನಾಡುವವನನ್ನು ದೇವರೆಂದು ಹೇಳಬಾರದು. ಆದ್ದರಿಂದ ಮನುಷ್ಯನಾಗಿ

ಬಂದಿರುವ ದೇವರನ್ನು ಭಗವಂತನು ಎನ್ನುತ್ತಿದ್ದೇವೆ. ದೇವರು ಭಗವಂತನಾಗಿ ಅಂದರೇ ಮನುಷ್ಯನಾಗಿ ದ್ವಾಪರಯುಗದ ಕೊನೆಯಲ್ಲಿ ಬಂದು ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನದಲ್ಲಿ ಏರ್ಪಟ್ಟಿರುವ ಕಲುಷಿತವನ್ನು ತೆಗೆದುಹಾಕಿ, ಜ್ಞಾನವನ್ನು ಆಕ್ರಮಣಗಾರರಿಂದ ಬಿಡಿಸಬೇಕೆಂದು ತಾನು ಹೇಳಿರುವ ಭಗವದ್ಗೀತೆಯಲ್ಲಿ ನಾಲ್ಕು ಅಧರ್ಮಗಳನ್ನು ಎರಡುಕಡೆ ಹೇಳಿ, ತನ್ನ ಮೂರು ಧರ್ಮಗಳನ್ನು ಭಗವದ್ಗೀತೆಯಲ್ಲಿ ಅನೇಕ ಕಡೆಗಳಲ್ಲಿ ಹೇಳಿದ್ದಾನೆ. ಮನುಷ್ಯರಾಗಿ ನಾವು ಏನೂ ಮಾಡದೇ ಹೋದರೂ, ಮನುಷ್ಯನಾಗಿ ಬಂದಿರುವ ಭಗವಂತನ ಮಾತುಗಳನ್ನೇ ಪ್ರಜೆಗಳಿಗೆ ಅರ್ಥವಾಗುವಂತೆ ಮಾಡಬಹುದು. ಅದೇ ಪ್ರಯತ್ನ ನಾನು ಮಾಡುತ್ತಿದ್ದೇನೆ ಹೊರತು ದೇವರಿಗೆ ಕೈಲಾಗದಿರುವುದು ನನಗೆ ಕೈಲಾಗುತ್ತದೆಂದು ನಾನು ಎಲ್ಲಿಯೂ ಹೇಳಲಿಲ್ಲ. ದೇವರು ಮನುಷ್ಯನಾಗಿ ಬಂದು ಧರ್ಮಗಳನ್ನು ಅಧರ್ಮಗಳನ್ನು ತಿಳಿಸಿದ್ದಾನೆ. ಅವುಗಳನ್ನೇ ಜ್ಞಾಪಕ ಮಾಡುವುದರಿಂದ ಧರ್ಮಗಳು ಯಾವುವೋ ಅಧರ್ಮಗಳು ಯಾವುವೋ ಸ್ವಲ್ಪ ಕಾಲಕ್ಕಾದರೂ ಎಲ್ಲರಿಗೂ ತಿಳಿಯಬಲ್ಲವು.

ಹುಟ್ಟಿದ ಮನುಷ್ಯರೆಲ್ಲರಿಗೂ ದೇವರ ಜ್ಞಾನದ ಮೇಲೆ ಆಸಕ್ತಿಯಿಲ್ಲ. ದೇವರನ್ನಾಗಲೀ, ದೇವರ ಜ್ಞಾನವನ್ನಾಗಲೀ ನೆನೆಯುವವರು ಅಪರೂಪವಾಗಿ ಇರುತ್ತಾರೆ. ಜೀವನಕಾಲದಲ್ಲಿ ತಮ್ಮ ಬದುಕುಹಾದಿಯನ್ನು ಕುರಿತು ಆಲೋಚಿಸುವವರೇ ಹೆಚ್ಚಾಗಿರುವರು. ಅಂಥವರು ಆಸೆಗೊಳಗಾಗಿ ತಾವು ಯಾರಿಂದ ಲಾಭವನ್ನು ಪಡೆಯೋಣಾ! ಎಂದು ನೋಡುತ್ತಿರುತ್ತಾರೆ. ಹಾಗೆ ಆಸೆಯಲ್ಲಿ ಮುಳುಗಿರುವವರು ದೇವರ ಜ್ಞಾನವನ್ನು ಏನೂ ತಿಳಿಯದೇ ತಮಗೆ ಲಾಭವನ್ನು ಕೈಗೂಡಿಸುವವರು ಯಾವ ದೇವರೆಂದು ನೋಡುತ್ತಿರುತ್ತಾರೆ. ಅಂಥವರು ಜ್ಞಾನ ಕಬ್ಜಾದಾರರ ಕೈಯಲ್ಲಿ ಸುಲಭವಾಗಿ ಸಿಗುವರು. ಈ ಯಜ್ಞವು ಮಾಡಿದರೆ ಈ ಲಾಭ ಬರುತ್ತದೆ, ಈ ಯಾಗವನ್ನು ಮಾಡಿದರೆ ಈ ಕೋರಿಕೆ ನೆರವೇರುತ್ತದೆ. ಈ ತಪಸ್ಸು ಮಾಡಿದರೇ ಈ ಕಾರ್ಯವು ನೆರವೇರುತ್ತದೆ ಎಂದು ಹೇಳುವುದರಿಂದ ಅವರ ಮಾತುಗಳನ್ನು ಕೇಳಿ ಅವುಗಳನ್ನೇ ಪ್ರಜೆಗಳು

ಆಚರಿಸುವುದಕ್ಕೆ ಪ್ರಾರಂಭಿಸುತ್ತಿದ್ದಾರೆ. ಈ ವಿಧವಾಗಿ ಪ್ರಜೆಗಳು ತಮ್ಮ ಕೋರಿಕೆಗಳ ಕಾರಣದಿಂದ ತಮಗೆ ತಿಳಿಯದೇನೇ ಅಧರ್ಮದೊಳಗೆ ಹೋಗಿ ಸಿಲುಕಿ ಕೊಳ್ಳುತ್ತಿದ್ದಾರೆ. ಒಂದುಬಾರಿ ಪ್ರಪಂಚ ಕೋರಿಕೆಗಳ ನಿಮಿತ್ತ ಅಧರ್ಮಗಳಲ್ಲಿ ಸಿಲುಕಿಕೊಂಡವನು ಅವುಗಳಿಂದ ತಿರುಗಿ ಹೊರಬೀಳಲಾರನು. ಮನುಷ್ಯರಲ್ಲಿನ ಗುಣಗಳಿಂದ ಮನುಷ್ಯ ದೇವರ ಮಾರ್ಗವನ್ನು ಬಿಟ್ಟು ಅಜ್ಞಾನ ಮಾರ್ಗವನ್ನು ಅವಲಂಭಿಸುತ್ತಿದ್ದಾನೆ. ಮನುಷ್ಯರಲ್ಲಿನ ಗುಣಗಳನ್ನೇ ಮಾಯೆ ಎಂದು ಹೇಳುತ್ತಿದ್ದೇವೆ. ಹನ್ನೆರಡು ಗುಣಗಳ ಸಮೂಹವು ಮಾಯೆಯಾಗಿದೆ. ಮಾಯೆ ಮನುಷ್ಯನನ್ನು ನಿರಂತರವೂ ದೇವರಿಗೆ ದೂರವಾಗಿ ಕಳುಹಿಸಬೇಕೆಂದು, ದೇವರಿಗೆ ಮನುಷ್ಯ ಹತ್ತಿರವಾಗಿ ಬರಬಾರದೆಂದು ಪ್ರಯತ್ನಿಸುತ್ತಿರುತ್ತದೆ. ಗುಣಗಳ ಮಾಯೆ ಬಹಳ ಬಲವಾದುದು. ಆದಕಾರಣ ಮಾಯೆಯ ಪ್ರಭಾವದಿಂದ ಯರೂ ಹೊರಬೀಳಲಾರರು.

ಹುಟ್ಟಿದ ಪ್ರತಿ ಮನುಷ್ಯ ಅಧರ್ಮಗಳನ್ನೇ ಆಚರಿಸುತ್ತಿರುವುದರಿಂದ ದೇವರ ಧರ್ಮಗಳು ತಿಳಿಯದೇ ಹೋಗಿವೆ. ದೇವರ ಧರ್ಮಗಳು ತಿಳಿಯದೆ ಹೋಗಿರುವುದರಿಂದ ಜ್ಞಾನವನ್ನು ಕಬ್ಜಾ ಮಾಡಿರುವವರನ್ನು ಮನುಷ್ಯ ಗುರುತಿಸಲಾರದೆ ಹೋಗುತ್ತಿದ್ದಾನೆ. ಆದ್ದರಿಂದ ದೇವರ ಜ್ಞಾನವು ಕೆಲವರ ಕೈಗಳಲ್ಲಿ ಕಬ್ಜಾ ಆಗಿದೆಯೆಂದು ಎಲ್ಲರಿಗೂ ತಿಳಿಯದೇ ಹೋಗಿದೆ. ದೇವರ ಜ್ಞಾನವು ಕಬ್ಜಾ ಆಗಿದೆಯಾ ಇಲ್ಲವಾ? ಎಂದು ತಿಳಿಯಬೇಕೆಂದರೆ ಮುಖ್ಯವಾಗಿ ಮೂರು ಭಾಗಗಳಾಗಿರುವ ದೈವಗ್ರಂಥವನ್ನು ಓದಬೇಕು. ದೈವಗ್ರಂಥವು ಮೂರು ಹೆಸರುಗಳಿಂದ ಮೂರು ಮತಗಳಿಗೆ ಸಂಬಂಧಿಸಿರುವುದಾಗಿದ್ದರೂ, ಅದು ಒಂದೇ ದೇವರಿಗೆ ಸಂಬಂಧಿಸಿರುವುದೇ, ಒಂದೇ ಜ್ಞಾನಕ್ಕೆ ಸಂಬಂಧಿಸಿರುವುದೇ. ದೈವಗ್ರಂಥವನ್ನು ಓದಿದ ನಂತರ ದೇವರ ಜ್ಞಾನವು ಕಬ್ಜಾ ಮಾಡಲಾಗಿದೆಯೆಂದು ಪ್ರತಿ ಒಬ್ಬರಿಗೂ ತಿಳಿದುಬರುವುದು. ಆಗ ನಿಜವಾದ ಜ್ಞಾನವನ್ನು ಮನುಷ್ಯ ತಿಳಿಯಬಲ್ಲನು. ಪ್ರತಿ ಮನುಷ್ಯ ಕಬ್ಜಾದಾರರಿಂದ ತಿಳಿದ ಜ್ಞಾನವನ್ನು ಬಿಟ್ಟು, ನಿಜವಾದ ದೇವರ ಜ್ಞಾನವನ್ನು ತಿಳಿದ ದಿನ, ದೇವರ ಧರ್ಮಗಳು ಪೂರ್ತಿಯಾಗಿ ನೆಲೆಗೊಂಡು ಅಧರ್ಮಗಳು ಇಲ್ಲದೇ ಹೋಗುವವು.

ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಮನುಷ್ಯ ಅಧರ್ಮಗಳನ್ನು ತಿಳಿಯುವುದರಿಂದ, ಆಚರಿಸುವುದರಿಂದ ಆತನಿಗೆ ಏನು ನಷ್ಟ ಉಂಟಾಗುತ್ತದೆ? ಧರ್ಮಗಳನ್ನು ತಿಳಿಯುವುದರಿಂದ ಆಚರಿಸುವುದರಿಂದ ಮನುಷ್ಯನಿಗೆ ಏನು ಲಾಭ ಉಂಟಾಗುತ್ತದೆ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿದೆ ಇರುವುದು. ಮನುಷ್ಯ ಕರ್ಮಗಳನ್ನು ಸಂಪಾದಿಸಿಕೊಂಡು ಅವುಗಳನ್ನು ಅನುಭವಿಸುವುದಕ್ಕೆ ಹುಟ್ಟುತ್ತಿರುವವನು. ಜೀವನದಲ್ಲಿ ಕರ್ಮಗಳನ್ನು ಅನುಭವಿಸಲಾರದೆ ದುಃಖಪಡುತ್ತಿದ್ದಾನೆ. ಕರ್ಮಗಳಿಂದ ಬರುವ ದುಃಖಗಳನ್ನು ತಪ್ಪಿಸಿಕೊಳ್ಳುವುದಕ್ಕೆ ತಿರುಗಿ ಮಾಯೆಯಲ್ಲಿ ಬಿದ್ದುಹೋಗಿ ದುಃಖದಿಂದ ತಪ್ಪಿಸಿಕೊಳ್ಳಬೇಕೆಂಬ ಉದ್ದೇಶದಿಂದ ಅಧರ್ಮಗಳನ್ನು ಆಚರಿಸುತ್ತಿದ್ದಾನೆ. ಅಧರ್ಮಗಳಿಂದ ಕರ್ಮಗಳ ದುಃಖಗಳಿಂದ ಹೊರಬೀಳಬಹುದೆಂದುಕೊಳ್ಳುತ್ತಿದ್ದಾನೆ. ಆದರೇ ಅಧರ್ಮಗಳಿಂದ ಕರ್ಮ ಬಾಧೆಗಳು ಹೋಗುತ್ತಿಲ್ಲ. ಬಾಧೆಗಳಿಂದ ಹೊರಬೀಳಬಹುದೆಂದು ಅಧರ್ಮಗಳನ್ನು ಆಚರಿಸಿದರೇ ಹಳೆಯಕರ್ಮ ಹೋಗದೇ ಇರುವುದಲ್ಲದೆ, ಅಧರ್ಮಗಳಿಂದ ಹೊಸ ಕರ್ಮ ಬಂದು ಸೇರುತ್ತಿದೆ. ಸತ್ಯವಾದ ದೇವರ ಧರ್ಮಗಳನ್ನು ಆಚರಿಸಿದಾಗ ಕರ್ಮಗಳ ಬಾಧೆಗಳು ಇಲ್ಲದೇ ಹೋಗುವುದೆಂಬ ವಿಷಯವು ಬಹಳಜನರಿಗೆ ತಿಳಿದಿಲ್ಲ. ದೇವರು ಮನುಷ್ಯನಾಗಿ ಬಂದು ಪ್ರಥಮ ದೈವಗ್ರಂಥವಾದ ಭಗವದ್ಗೀತೆಯನ್ನು ಹೇಳಿದಾಗ ಅದರಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ 37ನೇ ಶ್ಲೋಕದಲ್ಲಿ ಕರ್ಮಗಳನ್ನು ಕುರಿತು ಈ ವಿಧವಾಗಿ ಹೇಳಿದ್ದಾನೆ.

***ಶ್ಲೋ॥ ಯಥೈಧಾಂಸಿ ಸಮಿದ್ಧೋಗ್ನಿ ರ್ಭಸ್ಮಸಾತ್ಕು ರುತೇರ್ಜುನ॥***
***ಜ್ಞಾನಾಗ್ನಿ ಸ್ಸರ್ವ ಕರ್ಮಾಣಿ ಭಸ್ಮಸಾತ್ಕು ರುತೇ ತಥಾ॥***

**ಭಾವವು :–** “ಅಗ್ನಿಯಲ್ಲಿ ಎಷ್ಟು ಕಟ್ಟಿಗೆಗಳಾದರೂ ಸುಟ್ಟು ಬೂದಿಯಾದಹಾಗೆ ಜ್ಞಾನವೆಂಬ ಅಗ್ನಿಯಲ್ಲಿ ಸರ್ವಕರ್ಮಗಳು ಸುಟ್ಟು ಬೂದಿಯಾಗಿ ಬದಲಾಗುವುದು.”

ಮೇಲಿನ ವಾಕ್ಯವನ್ನು ನೋಡಿದ ನಂತರ ದೈವಜ್ಞಾನದಿಂದ ನಾವು ಅನುಭವಿಸುವ ಕರ್ಮಗಳು ಇಲ್ಲದೇ ಹೋಗುತ್ತವೆಂದು ತಿಳಿಯುತ್ತಿದೆ. ಇದನ್ನನು ಸರಿಸಿ ಪ್ರಪಂಚ ಕರ್ಮಗಳೆಲ್ಲಾ ದೈವಜ್ಞಾನದಲ್ಲಿ ಇಲ್ಲದೇ ಹೋಗುವುದರಿಂದ ಕರ್ಮಗಳಿಂದ ತಪ್ಪಿಸಿಕೊಳ್ಳಬಹುದೆಂದು ತಿಳಿಯುತ್ತಿದೆ. ದೇವರು ಹೇಳಿದಂತೆ ಧರ್ಮಯುಕ್ತವಾದ ಜ್ಞಾನದಿಂದ ಮನುಷ್ಯ ಅನುಭವಿಸುವ ಅನುಭವಗಳಿಂದ ತಪ್ಪಿಸಿಕೊಳ್ಳಬಹುದೆಂದು ತಿಳಿಯುತ್ತಿದೆ. ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳುವುದಕ್ಕೆ ಅವಕಾಶವಿದೆ. ಅದೇನೆಂದರೇ! ಮನುಷ್ಯ ವೃದ್ಧಾಪ್ಯವನ್ನು ದೈವಜ್ಞಾನದಿಂದ ತಪ್ಪಿಸಿಕೊಳ್ಳಬಲ್ಲನಾ? ಹಾಗೆಯೇ ದೈವಜ್ಞಾನದಿಂದ ಮನುಷ್ಯ ಮರಣದಿಂದ ತಪ್ಪಿಸಿಕೊಳ್ಳಬಲ್ಲನಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೇ! ಮನುಷ್ಯನಿಗೆ ಜೀವನದಲ್ಲಿ ಬರುವ ಕರ್ಮಗಳನ್ನು ಮಾತ್ರ ಜ್ಞಾನವು ಇಲ್ಲದಂತೆ ಮಾಡಬಲ್ಲದೆಂದು ಹೇಳಿದ್ದೇವೆ ಹೊರತು, ಮನುಷ್ಯ ಜೀವನದಲ್ಲಿ ಸರ್ವಸಾಧಾರಣವಾಗಿ ಬರುವ ಜೀವನ ದಶೆಗಳನ್ನು ಇಲ್ಲದೇ ಮಾಡಬಲ್ಲದೆಂದು ಹೇಳಲಿಲ್ಲ. ಬಾಲ್ಯ, ಯೌವನ, ಕೌಮಾಡಿ, ವೃದ್ಧಾಪ್ಯ, ಮರಣ ಎನ್ನುವವು ಎಲ್ಲರ ಜೀವನದಲ್ಲಿ ಸಮಾನವಾಗಿ ಬರುವ ದಶೆಗಳೇ ಹೊರತು, ಕರ್ಮಗಳಲ್ಲ. ಕೆಲವರ ಜೀವನದಲ್ಲಿ ಇರುವ ಕರ್ಮಗಳು ಇನ್ನುಕೆಲವರ ಜೀವನದಲ್ಲಿ ಇರುವುದಿಲ್ಲ. ಆದ್ದರಿಂದ ಕರ್ಮಗಳು ಎಲ್ಲರ ಜೀವನದಲ್ಲಿ ಸವಾನವಾಗಿ ಇರುವುದಿಲ್ಲ. ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ ಕರ್ಮಗಳಿರುವುದು ಆದರೆ, ಜೀವನ ದಶೆಗಳು ಮಾತ್ರ ದೇವರು ಎಲ್ಲರಿಗೂ ಸವಾನವಾಗಿ ಇಟ್ಟಿದ್ದಾನೆ. ಜ್ಞಾನವೆಂಬ ಅಗ್ನಿ ಕರ್ಮಗಳನ್ನು ಇಲ್ಲದೇ ಮಾಡಬಲ್ಲದು ಆದರೆ, ಪ್ರಕೃತಿ ಸಿದ್ಧವಾಗಿರುವ ದಶೆಗಳನ್ನು ಇಲ್ಲದೇ ಮಾಡಲಾರದು. ಜೀವನ ದಸೆಗಳಿಗು ಜ್ಞಾನಾಗ್ನಿಗು ಸಂಬಂಧವಿಲ್ಲ.

ಮನುಷ್ಯನ ಜೀವನದಲ್ಲಿ ಬರುವ ಕರ್ಮ ಬಾಧೆಗಳನ್ನು ಜ್ಞಾನಾಗ್ನಿ ಇಲ್ಲದೇ ಮಾಡಬಲ್ಲದೆಂದು ಭಗವದ್ಗೀತೆಯಲ್ಲಿ ಹೇಳಲಾಗಿದೆ. ಉದಾಹರಣೆಗೆ ರೋಗಗಳಲ್ಲಿ ದೊಡ್ಡ ರೋಗವಾಗಿ ಹೆಸರುವಾಸಿಯಾದ ಏಡ್ಸ್ ರೋಗವು

ಒಬ್ಬ ಮನುಷ್ಯನಿಗೆ ಬಂದು ಅದರಿಂದ ಆತನು ದುಃಖಪಡುತ್ತಿದ್ದಾನೆಂದುಕೊಳ್ಳಿ. ಅಂಥವನು ದೈವಜ್ಞಾನವನ್ನು ಹೊಂದಿದರೆ ಅಥವಾ ಹೊಂದಿದ್ದರೇ ತನಗಿರುವ ಜ್ಞಾನದಿಂದ ತನಗೆ ರೋಗರೂಪದಲ್ಲಿರುವ ಕರ್ಮವನ್ನು ಇಲ್ಲದೇ ಮಾಡಿಕೊಳ್ಳ ಬಹುದು. ದೇವರ ಜ್ಞಾನವು ಅಂದರೆ ದೈವಗ್ರಂಥದಲ್ಲಿ ದೇವರು ಹೇಳಿದ ಜ್ಞಾನವನ್ನು ತಿಳಿಯುವುದರಿಂದ ಮನುಷ್ಯ ಜ್ಞಾನಿಯಾಗಿ ಬದಲಾಗಿಹೋಗಬಲ್ಲನು. ಮನುಷ್ಯ ಜ್ಞಾನಿಯಾಗಿ ಬದಲಾದ ನಂತರ ಅವನಲ್ಲಿ ಜ್ಞಾನಾಗ್ನಿ ಎನ್ನುವ ಜ್ಞಾನಶಕ್ತಿ ನೆಲೆಸಿರುತ್ತದೆ. ಜ್ಞಾನಾಗ್ನಿ ನೆಲೆಸಿರುವವನಿಗೆ ಎಂತಹ ಕರ್ಮವಾದರೂ ಸುಟ್ಟುಹೋಗುವುದು. ಅಂಥವರಿಗೆ ಏಡ್ಸ್ ರೋಗವು ಸಹಿತ ಪೂರ್ತಿ ವಾಸಿಯಾಗಿಹೋಗುವುದು. ಹಾಗೆಯೇ ಎಂತಹ ಭಯಂಕರವಾದ ಕರ್ಮ ವಾದರೂ ಮನುಷ್ಯನಿಗೆ ತಿಳಿಯದೇನೇ ಮಾಯವಾಗಿ ಹೋಗುವುದು, ಅನುಭವದಿಂದ ತಪ್ಪಿಹೋಗುವುದು. ಇದು ಒಂದು ರೋಗ ರೂಪದಲ್ಲಿರುವ ಕರ್ಮವೇ ಆದರೂ ಯಾವ ವಿಧ ಸಮಸ್ಯೆಯಾಗಿರುವ ಕರ್ಮವಾದರೂ ದೈವಜ್ಞಾನಕ್ಕೆ ಕರಗಿ ಇಲ್ಲದೇ ಹೋಗುವುದು. ಈ ವಿಧವಾಗಿ ದೇವರು ಹೇಳಿದ ಧರ್ಮಯುಕ್ತವಾದ ಜ್ಞಾನದಿಂದ ಮಾತ್ರ ನಡೆಯಬಲ್ಲದು.

ಅಧರ್ಮಗಳೊಂದಿಗೆ ಕೂಡಿಕೊಂಡಿರುವ ಜ್ಞಾನದಿಂದ ಯಾವ ಚಿಕ್ಕ ಕರ್ಮವು ಸಹ ಹೋಗುವುದಿಲ್ಲ. ದೇವರು ಹೇಳಿರುವ ಧರ್ಮಗಳೊಂದಿಗೆ ಕೂಡಿಕೊಂಡಿರುವ ಜ್ಞಾನವು ಶಕ್ತಿವಂತವಾಗಿರುವುದು. ಆದರೇ ಮನುಷ್ಯ ತಾನು ಸೃಷ್ಟಿಸಿಕೊಂಡ ಜ್ಞಾನದಲ್ಲಿ ಯಾವ ವಿಧವಾದ ಶಕ್ತಿಯಿಲ್ಲ. ಮೂರು ಗ್ರಂಥಗಳಾಗಿ ರುವ ದೈವಗ್ರಂಥದಲ್ಲಿನ ಜ್ಞಾನವು ಶಕ್ತಿವಂತವಾದುದೇ ಆದರೂ, ಈದಿನ ಮನುಷ್ಯ ದೈವಜ್ಞಾನವನ್ನು ಇರುವುದು ಇದ್ದಹಾಗೆ ತಿಳಿದುಕೊಳ್ಳದೇ ದೈವಜ್ಞಾನದೊಳಗೆ ತನ್ನ ಭಾವಗಳನ್ನು ಸೇರಿಸಿ ಕೊನೆಗೆ ಜ್ಞಾನವನ್ನೇ ಕಬ್ಜಾ ಮಾಡಿದ್ದಾನೆ. ಅಂತಹ ಜ್ಞಾನದಲ್ಲಿ ಶಕ್ತಿ ಇರುವುದಿಲ್ಲ ಆದಕಾರಣ ಕರ್ಮಗಳು ಸುಟ್ಟುಹೋಗುವುದಿಲ್ಲ. ಈದಿನ ಎಷ್ಟೋ ಜನರು ಭಗವದ್ಗೀತೆಯನ್ನು ಹಿಂದೂಗಳಾಗಿ ಇರುವವರು ಓದುತ್ತಿದ್ದಾರೆ ಆದರೇ ಅವರು ಓದುತ್ತಿರುವುದು ಭಗವದ್ಗೀತೆಯಾದರೂ,

ಅದರಲ್ಲಿನ ಜ್ಞಾನಕ್ಕೆ ಮನುಷ್ಯ ಭಾವಗಳನ್ನು ಸೇರಿಸಿ ಬರೆಯುವುದರಿಂದ ಆತನು ಓದಿರುವ ಭಗವದ್ಗೀತೆಯಲ್ಲಿ ಜ್ಞಾನಶಕ್ತಿ ಇಲ್ಲವೆಂದೇ ಹೇಳಬಹುದು. ಉದಾಹರಣೆಗೆ ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ "ಚಾತುರ್ವರ್ಣ" ಎಂಬ ಶ್ಲೋಕಕ್ಕೆ ನಾಲ್ಕು ವರ್ಣಗಳಾಗಿ ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರ ಎಂದು ನಾಲ್ಕು ಕುಲಗಳ ಹೆಸರುಗಳು ಹೇಳುವ ಮನುಷ್ಯರ ಜ್ಞಾನವಿದೆ. ಹಾಗೆಯೇ ದೇವರ ಜ್ಞಾನದ ಪ್ರಕಾರ ಮೂರು ಗುಣಗಳ ಜಾತಿಗಳು, ಒಂದು ಗುಣವಿಲ್ಲದ ಜಾತಿ ಎಂದು ನಾಲ್ಕು ವಿಧಗಳ ಮನುಷ್ಯರನ್ನು ಹೇಳಿದ ಜ್ಞಾನ ಇದೆ. ಈ ಎರಡು ಭಾವಗಳಲ್ಲಿ ಒಂದು ಮನುಷ್ಯರ ಭಾವವಾಗಿರುವಾಗ, ಎರಡನೆಯದು ದೇವರ ಭಾವವಾಗಿಯೇ ಇದೆ. ಮನುಷ್ಯರ ಭಾವದಿಂದ ಕೂಡಿಕೊಂಡಿರುವ ಭಗವದ್ಗೀತೆಯನ್ನು ಓದಿದರೂ ಅದರಲ್ಲಿ ಜ್ಞಾನಶಕ್ತಿ ಲಭಿಸುವುದಿಲ್ಲ. ಅದೇ ದೇವರ ಭಾವದೊಂದಿಗೆ ಕೂಡಿಕೊಂಡಿರುವ ಭಗವದ್ಗೀತೆ ಯನ್ನು ಓದುವುದರಿಂದ ಮನುಷ್ಯನಿಗೆ ದೈವಶಕ್ತಿ ಅಥವಾ ಜ್ಞಾನಾಗ್ನಿ ಲಭಿಸುವುದು. ಅದರಿಂದ ಕರ್ಮಗಳು ಸುಟ್ಟುಹೋಗುವವು. ಹಾಗೆಯೇ ಮಧ್ಯೆ ದೈವಗ್ರಂಥವಾದ ಬೈಬಲ್‌ನಲ್ಲಿ, ಅಂತಿಮ ದೈವಗ್ರಂಥವಾದ ಖುರಾನ್‌ನಲ್ಲಿರುವ ದೇವರ ಜ್ಞಾನವು ಮನುಷ್ಯರಿಂದ ಕಬ್ಜಾ ಮಾಡಲ್ಪಟ್ಟಿದೆ. ಆದ್ದರಿಂದ ದೈವಗ್ರಂಥಗಳಾಗಿ ಇರುವವುಗಳನ್ನು ಓದಿದರೂ ಪ್ರಜೆಗಳಿಗೆ ಅದರಲ್ಲಿನ ಶಕ್ತಿ ಲಭಿಸುತ್ತಿಲ್ಲ. ಜ್ಞಾನದಿಂದ ಅವರ ಕರ್ಮಗಳು ಹೋಗುತ್ತಿಲ್ಲ. ಹಾಗೆ ನಡೆಯುವುದಕ್ಕೆ ಕಾರಣ ಮನುಷ್ಯರ ಹತೋಟಿಯಲ್ಲಿರುವ ಜ್ಞಾನವನ್ನು ತಿಳಿಯುವುದರಿಂದ ಯಾರಿಗೂ ಜ್ಞಾನಶಕ್ತಿ ಲಭಿಸುತ್ತಿಲ್ಲವೆಂದು ಅರ್ಥವಾಗುತ್ತಿದೆ. ಮನುಷ್ಯರು ಶಾಶಿಸಿದ ಜ್ಞಾನವಲ್ಲದೇ ದೇವರು ಹೇಳಿದ ಜ್ಞಾನವನ್ನು ತಿಳಿಯುವುದಾದರೇ ತಪ್ಪದೇ ಮನುಷ್ಯರ ಕರ್ಮಗಳು ಸುಟ್ಟುಹೋಗಬಲ್ಲವು. ನಿಜವಾದ ಧರ್ಮಗಳಿಂದ ಕೂಡಿದ, ದೇವರ ಭಾವದೊಂದಿಗೆ ಕೂಡಿಕೊಂಡಿರುವ ಗ್ರಂಥಗಳು ನಮಗೆ ಲಭಿಸುತ್ತಿಲ್ಲವೆಂದು ಯಾರೂ ಚಿಂತಿಸಬೇಕಾದ ಕೆಲಸವಿಲ್ಲ. ನಿಜವಾದ ದೇವರ ಧರ್ಮಗಳನ್ನು ತಿಳಿಸುವ ಸಲುವಾಗಿ, ಮತಗಳಿಗೆ ಅತೀತವಾಗಿ, ಮನುಷ್ಯರ ಭಾವಗಳಿಗೆ ದೂರವಾಗಿ ಮೂರು ದೈವಗ್ರಂಥಗಳನ್ನು ನಾವು ಬರೆಯುವುದು ನಡೆದಿದೆ.

ಅವು **"ಪ್ರಥಮ ದೈವಗ್ರಂಥವು ತ್ರೈತಸಿದ್ಧಾಂತ ಭಗವದ್ಗೀತೆ", "ದ್ವಿತೀಯ ದೈವಗ್ರಂಥ ಸುವಾರ್ತೆ ಜ್ಞಾನ ವಾಕ್ಯಗಳು", "ಅಂತಿಮ ದೈವಗ್ರಂಥ ಖುರಾನ್‌ನಲ್ಲಿನ ಜ್ಞಾನ ವಾಕ್ಯಗಳು"** ಎಂಬ ಹೆಸರುಗಳಿಂದ ಬರೆಯಲಾಗಿವೆ. ಈ ಮೂರು ಗ್ರಂಥ ಗಳಲ್ಲಿರುವುದು ಸ್ವಚ್ಛವಾದ ದೈವಜ್ಞಾನವೆಂದು ಹೇಳುತ್ತಿದ್ದೇವೆ. ಇವುಗಳಲ್ಲಿ ಮನುಷ್ಯ ಕಬ್ಜಾ ಮಾಡಿರುವ ಜ್ಞಾನವು ಎಷ್ಟು ಮಾತ್ರವಿಲ್ಲ. ಆದ್ದರಿಂದ ಈ ಮೂರು ಗ್ರಂಥಗಳ ಜ್ಞಾನವು ಕರ್ಮಗಳನ್ನು ಸುಡುತ್ತಿದೆ. ಈಗಲಾದರೂ ಮನುಷ್ಯರು ದೇವರ ಜ್ಞಾನವನ್ನು ಮತಗಳಿಗೆ ಅತೀತವಾಗಿ ತಿಳಿದುಕೊಂಡು ದೈವಶಕ್ತಿಯನ್ನು ಹೊಂದಬಲ್ಲರೆಂದು ಆಶಿಸುತ್ತಾ ಇದರೊಂದಿಗೆ ಮುಗಿಸುತ್ತಿದ್ದೇವೆ.

## ಸಮಾಪ್ತಿ



**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರವು ಎಷ್ಟು ಅವಶ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರವು ಅಷ್ಟೇ ಅವಶ್ಯವಾಗುವುದು.**



**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರಜನ ಅಲ್ಲವೆಂದರೂ ಅದು ಸತ್ಯವಲ್ಲ.**





ಸವಿವರವಾಗಿ ತಿಳಿಸಿದ್ದಾರೆ. ಈದಿನ ದಕ್ಷಿಣ ಭಾರತದೇಶಕ್ಕೆ ಪರಿಮಿತವಾದ ದ್ರಾವಿಡರ ಮೇಲೆ ಆಕ್ರಮಿಸಿಕೊಂಡ ಆರ್ಯ ಜಾತಿ ಇಂದಿಗೂ ಆಧಿಪತ್ಯ ನಡೆಸುತ್ತಿರುವುದೆಂಬ ನಗ್ನ ಸತ್ಯ ತಿಳಿಯಬಹುದು. ಮಾನವಾಕಾರದಲ್ಲಿರುವ ಭಾರತದೇಶದ ಚಿತ್ರ ಪಟ ಗ್ರಂಥದೊಳಗೆ, ಪಾಠಕರನ್ನು ನಿಶ್ಚೇಷ್ಟರಾಗಿ ಮಾಡುವುದು.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧ**

ಹಿಂದೂ ಪದಕ್ಕೆ ನಿರ್ವಚನ ತಿಳಿಯದೆಂದು ಕೇಂದ್ರ ಹೋಂಶಾಖ ತಿಳಿಸಿತು. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರ ಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕಿನ ಕಾನೂನಿಗೆ ಮಾಡಿಕೊಂಡ ಪಿಟೀಷನ್‌ಗೆ ಉತ್ತರ ಕೊಡುತ್ತಾ ಹೋಂಶಾಖ ಮೇಲಿನ ರೀತಿಯಲ್ಲಿ ಸ್ಪಂದಿಸಿತು. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧಗಳ ಶಾಖಾಧಿಕಾರಿ ಗುರತಿಸಿದಂತೆ ಕೇಂದ್ರ ತಿಳಿಸಿತು. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿ ಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀ ಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.

ಪ್ರಮುಖರ ಲೇಖ



# ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

**visit website : www.thraithashakam.org**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
   ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.
2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.
3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.
4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.
5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.
6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ"

ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

--ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

**Cell:09705864675, 09440556968, 9611133635**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ





**ಇಂದೂ ಜ್ಞಾನವೇದಿಕೆ** (I.G.V)

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org


www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

(Regd.No.: 459/2011)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@khudaislamicspiritualsociety.org

*www. khudaislamicspiritualsociety.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ




**ಪ್ರಬೋಧ ಸೇವಾ ಸಮಿತಿ (P.S.S.)**

(Regd.No.: 304/1991)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

*www. thraithashakam.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ–509381

e-mail id : info@dravidashreshtisangham.org

***www.dravidashreshtisangham.org***

# ದೇವರ ಜ್ಞಾನ

# ಕಬ್ಜಾ ಆಗಿದೆ










ದೇವರ ಜ್ಞಾನ













ಕಬ್ಜಾ ಜ್ಞಾನ

Author :

The Only Guru of Three Religions

The Spiritual Emperor, Thraitha Theorem Originator

Sri Acharya Prabodhananda Yogeeshwarulu

**www.thraithashakam.org**